3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿ ಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರುಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್ (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ.ಎಲ್. ನಾರಾಯಣ - VS - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತರ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.

23. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.

24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ಯಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಪಿ.ಆರ್. 218 ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ
## ನೇಮಕಾತಿ ಆದೇಶ
## ಜಿಲ್ಲಾ ನೋಂದಣಾಧಿಕಾರಿಗಳು, ಹಾಸನ ಇವರ ನಡವಳಿಗಳು

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಹಾಸನ ಜಿಲ್ಲೆಯಲ್ಲಿ ಬೆರಳಚ್ಚುಗಾರರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಬೆರಳಚ್ಚುಗಾರರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:**
1) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ:ಸಿಬ್ಬಂದಿ:124/2001-02, ದಿನಾಂಕ: 02.01.2002.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಎರಡನೇ ಅಧಿಸೂಚನೆ ಸಂಖ್ಯೆ: ಇಎಸ್‌ಟಿ-1-274/2001-02, ದಿನಾಂಕ: 17.08.2002 (ದಿನಾಂಕ: 22.08.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
4) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಬೆರಳಚ್ಚುಗಾರರ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ: ಇಎಸ್‌ಟಿ-1-274/2001-02, ದಿನಾಂಕ: 19.11.2005.
5) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: ಇಎಸ್‌ಟಿ-1-274/2001-02, ದಿನಾಂಕ: 04.04.2006.

**ಪ್ರಸ್ತಾವನೆ:**

ಈ ಇಲಾಖೆಯ ಹಾಸನ ಜಿಲ್ಲೆಯಲ್ಲಿ ಬೆರಳಚ್ಚುಗಾರರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಹಾಸನ ಜಿಲ್ಲೆ | ಒಂದು | ಇಲ್ಲ | ಒಂದು |

ಈ ಬ್ಯಾಕ್‌ಲಾಗ್ ಹುದ್ದೆಯ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿಯನ್ನು ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ನಿಯಮಾನುಸಾರ ಉಲ್ಲೇಖ (4) ರನ್ವಯ ದಿನಾಂಕ: 19.11.2005 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಬೆರಳಚ್ಚುಗಾರರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಮೇಲ್ಕಂಡಂತೆ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

### ಆದೇಶ ಸಂಖ್ಯೆ: 3/2006-07, ದಿನಾಂಕ: 19ನೇ ಏಪ್ರಿಲ್ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (5) ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ.3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ಬೆರಳಚ್ಚುಗಾರರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ಬೆರಳಚ್ಚುಗಾರರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಜನ್ಮ ದಿನಾಂಕ | 21.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ಬೆರಳಚ್ಚುಗಾರರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿ ಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | ದಿಲೀಪ್ ಶೇರ್‌ಖಾನೆ S/o ಬಸವರಾಜ ರಾಮಪ್ಪ ಶೇರ್‌ಖಾನೆ, ಮುಕ್ಕಾಂ:ಪೋಸ್ಟ್: ಯಾದವಾಡ, ಗೋಕಾಕ್ ತಾಲ್ಲೂಕ್, ಜಿಲ್ಲಾ: ಬೆಳಗಾಂ-591 136 | SC | 15.08.1970 | 32.01.06 | SSLC: 59.666<br>ಕನ್ನಡ ಬೆರಳಚ್ಚು ಸೀನಿಯರ್ 81.500<br>**ಒಟ್ಟು 141.166**<br>ಸರಾಸರಿ ಶೇಕಡಾವಾರು ಅಂಕಗಳು: 70.583 | ಜಿಲ್ಲಾ ನೋಂದಣಿ ಕಛೇರಿ, ಹಾಸನ, ಹಾಸನ ಜಿಲ್ಲೆ | ಪರಿಶಿಷ್ಟ ಜಾತಿ ಸಾಮಾನ್ಯ ಅರ್ಹತಾ ಅಭ್ಯರ್ಥಿ ಮುಖ್ಯಪಟ್ಟಿ |

S.S.L.C. ಅಂಕಪಟ್ಟಿಯ ನೋಂದಣಿ ಸಂಖ್ಯೆ: 178962 ಮಾರ್ಚ್ 1988 (ವರ್ಷ)ರ ಪ್ರಕಾರ ಮೇಲ್ಕಂಡ ಅಭ್ಯರ್ಥಿಯ ಜನ್ಮ ದಿನಾಂಕವು 15.08.1970 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
6. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
7. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
9. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
10. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
11. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್ (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
13. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ.ಎಲ್. ನಾರಾಯಣ - VS - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
14. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳುಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
15. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು

ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.

16. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
17. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
19. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
20. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
21. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
22. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ಯಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಹಾಸನ ಜಿಲ್ಲೆ, ಹಾಸನ

ಪಿ.ಆರ್. 223

**WATER RESOURCES M.I. DEPARTMENT**
**OFFICE OF THE EXECUTIVE ENGINEER, M.I. DIVISION, BIDAR**
**TENDER NOTIFICATION**
**No. EE/MID/BDR/TS.3/Tender/Tripurant/IMPT-HKDB/2006/787, Dated: 10th April 2006**

Sealed Item Rate Tenders in duplicate in PWG Form 65,66 are invited from the registered Civil Contractors for the following works.

| Sl. No. | Name of Works | Approximate Amount of work put to tender | Earnest Money Deposit (EMD) | Cost of blank tender schedule (Non refundable) | Class of contractor eligible. |
|---|---|---|---|---|---|
| 1 | Improvements to Tripuranth M.I. tank in Basavakalyan Taluka, Bidar District under HKADB. | Rs.9.24 lakhs. | Rs.18480.00 | Rs.800.00 + taxes. | Class-III & above. |

The period allotted for completing the above work is **40 days (Forty), including monsoon.**
The calendar of events for the work is as below.

| | | |
|---|---|---|
| 1) | Last date for submitting application for Blank tender schedules (During Office Hours) | 29.04.2006 |
| 2) | Date of Issue of Blank tender Schedules (During Office Hours) | 03.05.2006 |
| 3) | Date of submission of filled Tender Schedules | 08.05.2006 up to 12.30 PM |
| 4) | Date of Opening the Tenders (if possible) | 08.05.2006 at 1.00 P.M. |

**CONDITIONS:**

1) The requisite E.M.D. in the shape of D.D. or F.D.R. drawn on scheduled Bank in Favour of Executive Engineer, M.I. Division, Bidar shall be submitted along with the application for the blank tender schedules. The same should be valid for a minimum period of 90 days from the date of opening.
2) The Tenderer shall enclose the copy of Registration to the application. Original Registration Pass Book shall be produced at the time of receiving blank Tender Schedules.
3) Cost of Blank Tender schedules will not refunded in any case.
4) Right to Reject any or all the tenders is reserved.
5) Postal transaction of tenders not allowed.
6) If any of the above mentioned dates fall on General Holidays, immediately next date will hold good.

**S. MANJUNATH SAJJAN**
Executive Engineer, M.I. Division, Bidar.

PR- 220

**KARNATAKA STATE BOARD OF WAKFS**

**[Constituted by the Government of Karnataka under the Wakf Act, 1995 (CENTRAL ACT-43 OF 95)]**

**Darul Awkaf, No.6, Cunningham Road, Bangalore-560 052**

**CORRIGENDUM No.KTW/MSC/74/BJR/05-06, Dated: 4th February 2006**

**Sub:** Correction of entries in respect of Dargah Hazrath Peer Gaibi Saheb behind Govt. Polytechnic College, Haveligalli, Bijapur.

**Ref:** No.DWAC/MSC/8/BJR/05/322, dated: 23.12.2005 from the Administrator, DWAC, Bijapur.

**PREAMBLE:**

The Dargah Hazrath Peer Gaibi Saheb situated behind Govt. Polytechnic College, Haveligalli Bijapur, has already been registered as Wakf under the provisions of Wakf Act 1995. Now as per the recommendations of the Administrator, DWAC, Bijapur, there are some descripencies and has therefore requested to correct them. Accordingly, a Public Notice dated: 7.12.2005 was issued by this office calling objections/suggestions if any, to the proposal within fifteen days after publication of this Public Notice. Whereas the Administrator, DWAC, Bijapur, vide their report No. DWAC/REG/8/BJR/86-87/266 Dated: 2.12.2005 has reported that no suggestions were received in the matter and requested to accord approval. Hence this Corrigendum.

| Existing entries | | | Read the corrected entries | | |
|---|---|---|---|---|---|
| Sl.No. Kitabul Awkaf | Name, Class & description of the Wakf | Particulars of Wakf properties | Sl.No. Kitabul Awkaf | Name, Class & description of the Wakf | Particulars of Wakf properties |
| 1 | 2 | 3 | 1 | 2 | 3 |
| 46 | Dargah Hazrath Peer Gaibi Saheb situated in CTS No.637/a1-a-1a of Ward No.V, measuring: 6-Acres 25 guntas behind Govt. Polytechnic College, Bijapur. | CTS No.637/A/A-1A Ward No.V of Bijapur as under<br>North: CTS No.637/A 1A-1A of Dargah<br>South: CTS No.637/A-1A/1A of Dargah<br>West: Open space thereafter Polytechnic College.<br>East: CTS No.637/A-1A-1A of Dargah | 46 | Dargah Hzrath Peer Gaibi Saheb Behind Govt. Polytechnic College, Bijapur. | Sy.No.911A<br>Measuring: 6-A 25-Guntas<br>Ward No.V and CTS No.637 A/1A<br>6 acres 25 Guntas<br>Measuring:-<br>East: 381, West: 260,<br>North: 393, South: 446 Boundaries<br>East: Dargah area & thereafter road<br>West: Sarkari Polytechnic College.<br>North: Road.<br>South: Open space of Dargah thereafter Sarkari Polytechnic College. |

Chief Executive Officer,
Karnataka State Board of Wakfs.

PD-50

## ಕರ್ನಾಟಕ ಮೃಗಾಲಯ ಪ್ರಾಧಿಕಾರ
## ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83
## ಸಂಕ್ಷಿಪ್ತ ಮರುಟೆಂಡರು ಪ್ರಕಟಣೆ
### ಸಂಖ್ಯೆ: ಎ1-ಬಬಪಾ-ಫೀಡ್-ಸಿಆರ್-8/2006-07, ದಿನಾಂಕ: 17ನೇ ಏಪ್ರಿಲ್ 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2006-2007ನೇ ಸಾಲಿನಲ್ಲಿ ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನಲ್ಲಿರುವ ವನ್ಯಪ್ರಾಣಿಗಳಿಗೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವಂತೆ ಆಹಾರ ಸರಬರಾಜು ಮಾಡುವ ಕೆಲಸವನ್ನು ಗುತ್ತಿಗೆ ಆಧಾರದ ಮೇಲೆ ಕೈಗೊಳ್ಳುವುದಕ್ಕೆ ಸಂಬಂಧಿಸಿದಂತೆ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನಲ್ಲಿ ನೋಂದಾಯಿಸಿದ ಗುತ್ತಿಗೆದಾರರಿಂದ ಟೆಂಡರುಗಳನ್ನು ಕರೆಯಲಾಗಿದೆ. ಟೆಂಡರು ಅರ್ಜಿಯನ್ನು ಮೊಹರು ಮಾಡಿದ ಲಕೋಟೆಯಲ್ಲಿ ಈ ಕಛೇರಿ ದಿನಾಂಕ: 22.05.2006ರ ಮಧ್ಯಾಹ್ನ 3.00 ಗಂಟೆ ಒಳಗಾಗಿ ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ಸಲ್ಲಿಸಲು ತಿಳಿಸಲಾಗಿದೆ. ಅದೇ ದಿನಾಂಕ: 4.00 ಗಂಟೆಗೆ ಟೆಂಡರನ್ನು ತೆರೆಯಲಾಗುವುದು.

**ಷೆಡ್ಯೂಲ್**

| ಯೂನಿಟ್ ಸಂಖ್ಯೆ | ವಿವರಗಳು | ಟೆಂಡರಿಗೆ ಇಡಲಾದ ಆಹಾರ ಪದಾರ್ಥಗಳ ಅಂದಾಜು ಮೊತ್ತ ಲಕ್ಷ ರೂ.ಗಳಲ್ಲಿ | ಸಲ್ಲಿಸಬೇಕಾದ ಇ.ಎಂ.ಡಿ. ಹಣ ಲಕ್ಷ ರೂ.ಗಳಲ್ಲಿ |
|---|---|---|---|
| 1 | ಸಫಾರಿಗೆ ದನದ ಮಾಂಸ ಸರಬರಾಜು ಮಾಡುವುದು. | 51.00 | 5.10 |
| 2 | ಮೃಗಾಲಕ್ಕೆ ದನದ ಮಾಂಸ ಸರಬರಾಜು ಮಾಡುವುದು. | 6.00 | 0.60 |
| 3 | ಪುನರ್‌ವಸತಿ ಕೇಂದ್ರಕ್ಕೆ ದನದ ಮಾಂಸ, ಬೀಫ್ ಸರಬರಾಜು ಮಾಡುವುದು. | 76.00 | 7.60 |
| 4 | ಬಿ.ಎಫ್.ಎಫ್. ಹುಲಿಗಳಿಗೆ ದನದ ಮಾಂಸ ಸರಬರಾಜು ಮಾಡುವುದು. | 7.00 | 0.70 |

**ಷರತ್ತುಗಳು:**

1) ಗುತ್ತಿಗೆದಾರರು ಪ್ರತಿಯೊಂದು ಯೂನಿಟ್‌ಗೆ ರೂ.553/- (ತೆರಿಗೆಗಳು ಸೇರಿ) ಟೆಂಡರು ಫಾರಂನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ: 17.05.2006 ರಿಂದ 21.06.2006 ರವರೆಗೆ ಪಡೆಯಬಹುದು.
2) ಇನ್ನು ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ನಿರ್ದೇಶಕರು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83.

## ZOO AUTHORITY OF KARNATAKA
## OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE-83
## BRIEF TENDER NOTIFICATION
### No: A1-BBP-Feed-CR-8/2006-2007, Dated: 17th April 2006

It is hereby notified for the general information of the public that sealed tenders are invited and will be received by the Executive Director, Bannerghatta Biological Park, Bangalore-83 from the registered contractors of this office for supply of feeding commodities to the captive wild animals of Bannerghatta Biological Park for the year 2006-2007 up to 3.00 PM on 22.05.2006 as detailed in the schedule noted below. The tenders will be opened on the same day at 4.00 P.M.

**SCHEDULE**

| Unit No. | Particulars of works | Approximate cost of the commodities put to tender (Rs.In lakhs) | EMD to be furnished. (Rs.In lakhs) |
|---|---|---|---|
| 1 | Supply of Beef to Lion Safari | 51.00 | 5.10 |
| 2 | Supply of Beef to Zoo | 6.00 | 0.60 |
| 3 | Supply of Beef to Rescue Centre | 76.00 | 7.60 |
| 4 | Supply of Beef Born Free Foundation tigers. | 7.00 | 0.70 |

**CONDITIONS:**

1) The tender forms will be available in the office of the undersigned during the office hours from 17.05.2006 to 21.06.2006 on payment of Rs.553 (including taxes) at statutory rates separately for each unit.
2. Other detailed conditions can be had from the office of the undersigned during the office hours on working days.

Executive Director & Deputy Conservator of Forests,
Bannerghatta Biological Park, Bangalore-83.

P.D.51

**ZOO AUTHORITY OF KARNATAKA**

**OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE-83**

**PH: 080-7828540, 7828300, FAX: 080-7828400, EMAIL: bannerghatta@vsnl.net**

**No. A1-BBP-MP-PMC-1/2005-06, Dated: 22nd April 2006**

**INVITATION FOR "EXPRESSION OF INTEREST" FOR CONSULTING SERVICES OF VARIOUS WORKS FOR DEVELOPMENT OF BANNERGHATTA BIOLOGICAL PARK**

Zoo Authority of Karnataka invites **"Expression of Interest"** from well established and reputed Project Management Consultants (PMC) for providing consultancy services for the various works in the Bannerghatta Biological Park.

The project consists of construction of road works, building works, landscaping and gardening, animal enclosures, fencing and compound, parking facilities, improvement of lakes and other services such as electrical, sanitary, water supply etc., The envisaged cost of construction is about 10 crore.

**Eligibility criteria**

- ❖ Consultants should have satisfactorily carried out from their Bangalore based office at least one consultancy contract of Project Management of similar nature of work with project cost not less than Rs.10.00 crore which has been completed during the last 3 years (i.e., 2002-03, 2003-04 and 2004-05)
- ❖ Consultants should have achieved minimum annual financial turnover of Rs.25.00 lakhs in any of two year during 2002-03, 2003-04 and 2004-05.

1. Intended consultants/firms shall submit requisition for tender documents to above said office from 12.05.2006 to 15.05.2006.
2. Documents of the tenders may be purchased from the above said office from 17.05.2006 to 20.05.2006 with a non refundable fee of Rs.5,000/- in the form of Demand Draft (DD) on any scheduled bank, payable at Bangalore in favour of the **"Executive Director, Bannerghatta biological park, Bangalore-83".**
3. Pre bid meeting will be held on 25.05.2006.
4. Sealed tenders shall be submitted in the above office on or before 4:00 PM of 27.05.2006.
5. Tenders will be opened on 27.05.2006 at 4.30 PM.
6. Interest consultants/firms may obtain further information at the same address during the office hours (Tuesday Holiday)

PD-52

**FORM IV**

**(See Rule 12)**

**NOTICE**

It is hereby notified that the undersigned has changed his name from **RAYAPPA NAGAPPA VADDAR** to **RAYAPPA NAGAPPA KANDAGALL**

PD-94 **RAYAPPA NAGAPPA VADDAR**

**FORM IV**

**(See Rule 12)**

**NOTICE**

It is hereby notified that the undersigned has changed her name from **KAMALA RAJSHEKHAR WALI** to **KAMALA RAJSHEKHAR**

PD-96 **KAMALA RAJSHEKHAR WALI**

**ಪೊಲೀಸ್ ಅಧೀಕ್ಷಕರವರ ಕಾರ್ಯಾಲಯ, ಬಾಗಲಕೋಟೆ**

**ಟೆಂಡರ್ ಕಮ್ ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ: ಎಮ್.ಟಿ.ಬಿ.ಭಾ:ಹರಾಜು:750/2005-06, ದಿನಾಂಕ: ... ಏಪ್ರಿಲ್ 2006**

**ವಿಷಯ:** ಪೊಲೀಸ್ ವಾಹನಗಳ 2004-05ನೇ ಸಾಲಿನ ಹಳೆಯ ನಿರುಪಯುಕ್ತಗೊಳಿಸಿದ ಟಾಯರ್ ಟ್ಯೂಬ್, ಬ್ಯಾಟರಿ ಮತ್ತು ಇತರೆ ಬಿಡಿಭಾಗಗಳು ಟೆಂಡರ್ ಕಮ್ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಚ್.ಡಿ:198:ಇಎಮ್‌ವಿ:2000, ಬೆಂಗಳೂರು, ದಿನಾಂಕ: 19.6.2003.

2) ಪ್ರಧಾನ ಕಛೇರಿ ಹಿಂಬರಹ ಸಂಖ್ಯೆ: ವಾಸಾ:(3):1:97-98, ದಿನಾಂಕ: 17.7.2003.

ಮೇಲಿನ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಘಟಕದ ಪೊಲೀಸ್ ವಾಹನಗಳ ನಿರುಪಯುಕ್ತ ಟಾಯರ್, ಟ್ಯೂಬ್, ಬ್ಯಾಟರಿ ಬಿಡಿಭಾಗಗಳು ಬಾಗಲಕೋಟೆ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಆವರಣದಲ್ಲಿ ದಿನಾಂಕ: 05.06.2006 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಹರಾಜು ಮಾಡಲಾಗುವುದು.

**ಹಳೆಯ ಟಾಯರ್, ಟ್ಯೂಬ್, ಬ್ಯಾಟರಿಗಳ ವಿವರ**

| ಅ.ನಂ. | ಟಾಯರ್‌ಗಳ ಸೈಜ್ | ಒಟ್ಟು | | ಬ್ಯಾಟರಿಗಳ ಸೈಜ್ | |
|---|---|---|---|---|---|
| 1 | 600 16 | 80 | 1 | 12 ವೋಲ್ಟ ಮತ್ತು 13 ಪ್ಲೇಟ್ಸ್ | 28 |
| 2 | 325 19 | 01 | 2 | 12 ವೋಲ್ಟ ಮತ್ತು 11 ಪ್ಲೇಟ್ಸ್ | 01 |
| 3 | 2.15 ಆರ್-14ಸಿ | 05 | 3 | 06 ವೋಲ್ಟ ಮತ್ತು 07 ಪ್ಲೇಟ್ಸ್ | 02 |
| 4 | 7.50 16 | 05 | 4 | 12 ವೋಲ್ಟ ಮತ್ತು 07 ಪ್ಲೇಟ್ಸ್ | 02 |
| 5 | 6.70 16 | 05 | | **ಒಟ್ಟು** | **33** |
| | **ಒಟ್ಟು** | **96** | | | |
| | ಕಬ್ಬಿಣದ ಬಿಡಿಭಾಗಗಳು | | 05 ಕ್ವಿಂಟಲ್ | | |

**ಟೆಂಡರ್ / ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು:**

1) ನಿರುಪಯುಕ್ತ ಟೈರ್, ಬ್ಯಾಟರಿ ಮತ್ತು ಬಿಡಿಭಾಗಗಳು ಯಾವ ಸ್ಥಿತಿಯಲ್ಲಿವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
2) ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಮುನ್ನ ನಗದು ರೂಪದಲ್ಲಿ 5,000=00 ಗಳ ಠೇವಣಿಯನ್ನು ಕಛೇರಿಯಲ್ಲಿ ಪಾವತಿಸತಕ್ಕದ್ದು. ಹರಾಜು ಪ್ರಾರಂಭವಾದ ನಂತರ ಬಿಡ್‌ದಾರರಿಂದ ಠೇವಣಿ ಹಣವನ್ನು ಪಡೆಯಲಾಗುವುದಿಲ್ಲ ಹಾಗೂ ಠೇವಣಿ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡುವುದಿಲ್ಲ. ಠೇವಣಿ ಕಟ್ಟದೇ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.
3) ಆಸಕ್ತ ಬಿಡ್‌ದಾರರು (ಸಹಕಾರ ಸಂಘಗಳ ಮತ್ತು ಇತರೆ ಸಂಸ್ಥೆಗಳು ಸೇರಿದಂತೆ) ಮುಚ್ಚಿದ ಲಕೋಟೆಯಲ್ಲಿ ಟೆಂಡರನ್ನು ಸಲ್ಲಿಸತಕ್ಕದ್ದು. "ವಾಹನದ ನಿರುಪಯುಕ್ತ ಬಿಡಿಭಾಗಗಳು, ಟೈರ್, ಟ್ಯೂಬ್, ಮತ್ತು ಬ್ಯಾಟರಿಗಳನ್ನು ಖರೀದಿಸುವ ಬಗ್ಗೆ" ಎಂದು ಲಕೋಟೆಯ ಮೇಲೆ ಬಿಡಿ ಅಕ್ಷರಗಳಲ್ಲಿ ನಮೂದಿಸಿ ಜಿಲ್ಲಾ ಪೊಲೀಸ್ ಅಧೀಕ್ಷಕರು ಬಾಗಲಕೋಟರವರ ಕಛೇರಿಯಲ್ಲಿ ಖುದ್ದಾಗಿ ಸಲ್ಲಿಸತಕ್ಕದ್ದು.
4) ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ: 03.06.2006 ರಂದು ಸಂಜೆ 5.00 ಗಂಟೆಯೊಳಗಾಗಿ ಈ ಕಛೇರಿಗೆ ತಲುಪುವಂತೆ ಕಳುಹಿಸಬೇಕು. ತಡವಾಗಿ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
5) ಪೊಲೀಸ್ ಅಧೀಕ್ಷಕರು, ಬಾಗಲಕೋಟರವರು ಬಹಿರಂಗ ಹರಾಜು ನಡೆಸುವರು.
6) ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಇದ್ದರೆ ಆ ಸ್ಥಳದಲ್ಲಿಯೇ ಟೆಂಡರ್‌ದಾರರು ಪೂರ್ಣ ಸಹಿ ಮಾಡತಕ್ಕದ್ದು. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
7) ಟೆಂಡರ್ ಸಲ್ಲಿಸಿದ ಬಿಡ್‌ದಾರರಿಂದ ಅಥವಾ ಠೇವಣಿ ತುಂಬಿದ ಬಿಡ್‌ದಾರರಿಂದ ಹರಾಜುನಡೆಯುವ ದಿನದಂದು ಬಹಿರಂಗ ಬಿಡ್‌ಗಳನ್ನು ಪಡೆಯಲಾಗುವುದು.
8) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್ ದರವನ್ನು ದಾಖಲಿಸಿಕೊಳ್ಳಲಾಗುತ್ತದೆ. ಯಾರು ಅತೀ ಹೆಚ್ಚಿನ ದರವನ್ನು ಸೂಚಿಸುವರೋ ಅವರನ್ನು ಯಶಸ್ವಿ ಬಿಡ್‌ದಾರರೆಂದು ಪರಿಗಣಿಸಲಾಗುವುದು.
9) ನಿರುಪಯುಕ್ತ ವಾಹನ ಬಿಡಿಭಾಗಗಳ ಟೈರ್, ಟ್ಯೂಬ್ ಮತ್ತು ಬ್ಯಾಟರಿಗಳ ಮೇಲೆ ನಿಯಮದ ಪ್ರಕಾರ ಚಾಲ್ತಿಯಲ್ಲಿರುವ ತೆರಿಗೆಯನ್ನು ವಿಧಿಸಲಾಗುವುದು.
10) ಹರಾಜು ಮುಗಿದ ತಕ್ಷಣವೇ ಯಶಸ್ವಿಯಾಗದ ಬಿಡ್‌ದಾರರ ಠೇವಣಿಯನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.
11) ಯಶಸ್ವಿಯಾದ ಬಿಡ್‌ದಾರರು/ಟೆಂಡರ್‌ದಾರರು ಹರಾಜಿನ ಒಟ್ಟು ಬೆಲೆಯ ಶೇಕಡಾ 25 ರಷ್ಟು ಮೊತ್ತವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ನಗದು ರೂಪದಲ್ಲಿ ಹರಾಜಿನ ದಿನವೇ ಪಾವತಿಸಬೇಕು. ಡಿ.ಡಿ. ಮತ್ತು ಚೆಕ್ ಮುಖಾಂತರ ತುಂಬಿದ ಹಣವನ್ನು ಸ್ವೀಕರಿಸಲಾಗುವುದಿಲ್ಲ.
12) ಮೇಲ್ಕಂಡ ಟೆಂಡರ್ / ಹರಾಜಿನ ಸಂಬಂಧದಲ್ಲಿ ಯಾವುದೇ ವಾದ ವಿವಾದಗಳು ಉದ್ಭವಿಸಿದಲ್ಲಿ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಾಗಲಕೋಟ ಇವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
13) ಹರಾಜು ಮಾಡಲಾದ ನಿರುಪಯುಕ್ತ ಬಿಡಿಭಾಗಗಳನ್ನು ಟೈರ್, ಟ್ಯೂಬ್ ಹಾಗೂ ಬ್ಯಾಟರಿಗಳನ್ನು 7 ದಿನಗಳೊಳಗಾಗಿ ತಮ್ಮ ಸ್ವಂತ ವೆಚ್ಚದಿಂದ ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಅವರು ತುಂಬಿದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
14) ಹರಾಜಿನ ಯಾವುದೇ ಟೆಂಡರ್ / ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಪಡಿಸುವ / ತಿರಸ್ಕರಿಸುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಾಗಲಕೋಟ ಇವರು ಹೊಂದಿರುತ್ತಾರೆ. ಇವರ ತೀರ್ಮಾನವೇ ಅಂತಿಮವಾದುದು.
15) ಟೆಂಡರ್ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಬಿಡ್‌ದಾರರ ತಪ್ಪುಗ್ರಹಿಕೆಯಿಂದ ವಿವಾದ ಉಂಟಾಗಿ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ, ಅಂತಹ ಟೆಂಡರ್ / ಸವಾಲುದಾರರು ಮುಂಗಡವಾಗಿ ಕಟ್ಟಲಾದ (ಇ.ಎಂ.ಡಿ.) ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅಂತಹವರ ವಿರುದ್ಧ ಕಾನೂನು ಬದ್ಧವಾಗಿ ಕ್ರಮ ಕೈಗೊಳ್ಳಲಾಗುವುದು.
16) ಆಸಕ್ತ ಬಿಡ್‌ದಾರರು ಕಛೇರಿ ವೇಳೆಯಲ್ಲಿ ನಿರುಪಯುಕ್ತ ವಾಹನ ಬಿಡಿಭಾಗಗಳನ್ನು ಟೈರ್, ಟ್ಯೂಬ್ ಮತ್ತು ಬ್ಯಾಟರಿಗಳನ್ನು ಬಾಗಲಕೋಟೆಯ ಬಟವಾಡಿಯಲ್ಲಿರುವ ಜಿಲ್ಲಾ ಸಶಸ್ತ್ರ ಮೀಸಲು ಪಡೆದವರ ಕಛೇರಿಯ ಆವರಣದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ. ಇಚ್ಚೆಯುಳ್ಳವರು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪರಿಶೀಲನೆ ಮಾಡಿ ಹರಾಜಿನಲ್ಲಿ ಭಾಗವಹಿಸಬಹುದು.

ಪೊಲೀಸ್ ಅಧೀಕ್ಷಕರು, ಬಾಗಲಕೋಟೆ.

ಟೆಂಡರ್ ಫಾರಂನ ನಮೂನೆ

ನಿರುಪಯುಕ್ತ ಬಿಡಿಭಾಗಗಳಿಗೆ ಟೆಂಡರ್

ಗೆ,

ಪೊಲೀಸ್ ಅಧೀಕ್ಷಕರು,

ಬಾಗಲಕೋಟ ಜಿಲ್ಲೆ, ಬಾಗಲಕೋಟ.

ಮಾನ್ಯರೆ,

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ: ಎಂಟಿ:ಬಿಭಾಹರಾಜು:750:2005-06, ದಿನಾಂಕ: ............2006 ರಲ್ಲಿ ತಿಳಿಸಿದ ವಾಹನಗಳ ನಿರುಪಯುಕ್ತ ಟಾಯರ್, ಟ್ಯೂಬ್, ಬ್ಯಾಟರಿ ಹಾಗೂ ಬಿಡಿಭಾಗಗಳನ್ನು ರೂ...................... (ರೂಪಾಯಿ.................................. ............................) ಗಳಿಗೆ ಖರೀದಿಸಲು ಒಪ್ಪಿರುತ್ತೇನೆ.

ಸ್ಥಳ:

ದಿನಾಂಕ:

ತಮ್ಮ ವಿಶ್ವಾಸಿ

(ಬಿಡ್‌ದಾರರ ಪೂರ್ಣ ಸಹಿ ಮತ್ತು ವಿಳಾಸ)

ಪಿ.ಆರ್. 219

ಪೊಲೀಸ್ ಅಧೀಕ್ಷಕರು, ಬಾಗಲಕೋಟೆ.

## PUBLIC WORKS DEPARTMENT
## (NATIONAL HIGHWAY)
## OFFICE OF THE EXECUTIVE ENGINEER, NATIONAL HIGHWAY DIVISION, URVA, STORE, ASHOK NAGAR, MANGALORE-575006

**TENDER NOTIFICATION No: NHD/MNG/AE-2/C.R.F/NIT/2006-07/11, Dated: 3rd April 2006**

Sealed item rate tenders in duplicate for the work noted below are invited from Class-I Registered contractors in KPWD on behalf of the Governor of Karnataka. The sealed tender shall be submitted either in the office of the Superintending Engineer, National Highway Circle, Bangalore or in this office upto 4.00 P.M. on 15.05.2006 subject to the conditions laid down in Form No. PWG-65 & 66 of KPWD code Vol-II and in Karnataka Transparancy Public Procurement ordinance 2000 and Act 2000. If possible the tenders will be opened at 4.30 P.M. on 15.05.2006 in this office.

Application for Blank Tender Forms along with registration Certificate and cost of Blank Tender Documents in the form of D.D. (Non-refundable) will be received upto 4.30 P.M. on 12.05.2006 the Blank Tender forms will be issued on 12.05.2006 in this Office.

| Sl. No. | Name of Work | Amount put to Tender (In Rs.) | E.M.D. (In Rs.) | Cost of Tender Forms (in Rs) including taxes Non refundable | Nature of Work | Time for completion of work (Excluding monsoon) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | Improvements to MDR C.N.S. road to Keragodu-Ramenahally-Bediganahally-Bidarakka Road from KM 0.00 to 8.00 Kms in Holenarasipura Tq., Hassan District. (Job No: CRF-KNT-2006-644) | 47,00,000 | 47,000 | 7,500 | WBM / SDBC | 7 Months |
| 2 | Improvements to MDR from Hagare to Halebeedu from KM 3.00 to 14.60 KMs in Belur Tq., of Hassan District. | 37,00,000 | 37,000 | 7,500 | WBM / SDBC | 7 Months |

CONDITIONS:

1. Each tenderer shall use following machinery and submit evidence of ownership / pocession as detailed below, **at the time of submission of application. The documents shall be attested by a District level Officer and the originals shall be produced for verification at the time of submission of application,** or otherwise the application will not be accepted.

| | Machinery | Numbers | Evidence of ownership to be furnished |
|---|---|---|---|
| i) | Hot Mix Plant of "Above 40 to 60 T.P.H." capacity (as per MOST specification) | 1 | Purchase invoice/Sale deed with a copy of Purchase invoice from the seller. |
| ii) | Paver Finisher | 1 | -Do- |
| iii) | Mechanical sprayers | 2 | -Do- |

| Machinery | Numbers | Evidence of ownership to be furnished |
|---|---|---|
| iv) Vibratory Road Roller | 1 | -Do- |
| v) Static Road Roller | 2 | -Do- |
| vi) Tippers | 4 | Registration Certificate from R.T.O. with fitness certificate. |

2. The contractors interested in bidding for the work may submit an application to the undersigned along with cost of tender documents to be paid in the form of DD drawn in favour of the Executive Engineer, National Highway Division, Mangalore payable at Mangalore, along with application. The applicants should submit proof of registration while, submitting the application for tender schedules, otherwise the application will not be considered.
3. Each Tenderer should have completed satisfactorly similar works of value not less than 30% of the value of the intended contract (up dated at 10% per annum compoundable) in any one financial year during a block period of previous five financial years. Alternatively the contrator should have completed a billing of 30% of the value of the intended contract during the current financial year for similar works. The work experience certificate in this regard should invariably have mention of same nature/items of work executed, along with date of commencement and date of completion; otherwise the application will not be accepted.
4. The **EMD** in the form of FDR/DD/Bankers Cheque/Bank Guarantee drawn from a Nationalised or Scheduled Bank or NSC (Pledged in favour of the undersigned) shall be enclosed. The BankGuarantee Shall be in the Form as specified in PWG 66 supplied with the tender form. Otherwise tender will be rejected. Regarding the validity of EMD, tender condition etc. PWG-66 shall be referred and is binding on the tenderer.
5. The competent authority reserves the right to reject any or all tenders without assigning any reason there off.
6. The tendering by Joint venture is not allowed.

Any other details regarding the work can be obtained from the above office during the office hours.

Executive Engineer,
National Highway Division, Mangalore.

PR-221

**PUBLIC WORKS DEPARTMENT**

**OFFICE OF THE EXECUTIVE ENGINEER, P.W.D. DHARWAD DIVISION, DHARWAD**

**SHORT TERM TENDER NOTIFICATION (Item Rate and Two cover bid system)**

**(FIRST CALL)**

**No. EE PWD:DWR:PB-2:high court:TND:2005-06, Dated: 5th April 2006**

Sealed Item Rate tenders in prescribed form in duplicate under **Two Cover System** are invited by the undersigned on behalf of the Governor of Karnataka from the contractors registered as Class-I, in KPWD : CPWD : MES : UNION TERRITORY : ANY STATE GOVERNMENT for the following work.

| Sl. No. | Name of Work | Amount put to Tender (Rs.in Lakhs) | EMD (Rs.in Lakhs) | Cost of Tender Documents excluding Tax. (Not refundable) in Rs. | Period of Comple-tion including Mansoon | Last Date for | | | |
|---|---|---|---|---|---|---|---|---|---|
| | | | | | | Receipt Applications from the Contractors up to 5.30 P.M | Issue of blank Tender Documents up to 5.30 P.M. | Receipt of Completed Tender Documents up to 4.00 P.M. | Opening of Technical Bid at 11.00 A.M. |
| 1 | 2 | 3 | 4 | 5 | 6 | 7 | 8 | 9 | 10 |
| 1 | Cost. of Circuit Bench of High Court. at Dharwad | 6000.00 | 60.00 | 50,000/- | 18 Months | 19.05.06 | 24.05.06 | 29.05.06 | 30.05.06 |

The tenders for the work shall be submitted in Two Sealed covers. First cover shall contain technical bid and the second cover shall contain financial bid. These two covers shall be sealed and kept in another sealed cover duly superscribing the name of the work and shall be addressed to the undersigned with the name and full address of the bidder. Financial bids, of tenderers those who are

qualified only will be opened. Work Experience and financial capability and other necessary documents obtained from the competent authority should be furnished along with the tender, failing which, such tenders will be rejected. The completed sealed tenders will be received by the under signed in this office and office of the Superintending Engineer, P.W.D. Dharwad Circle, Dharwad upto 4.00 P.M. on the date specified for the receipt of tenders.

The tender is invited in accordance with the form PWG-65 & PWG-66 of PWD code and Karnataka transparency in Public procurement Act 1999 and Karnataka Transparency in Public Procurement Rules 2000 and subsequent amendments thereunder.

Application for the issue of blank tender form along with prescribed cost of tender documents in the form of DD drawn in favour of Executive Engineer, PWD Dharwad Division, Dharwad will be received on or before the specified date. The cost of tender form once paid is not refundable. Postal correspondence will not be entertained for obtaining tender documents.

CONDITIONS:

I General:

1. The applicant should submit his application in person or through his authorised representative along with the orginal contractor registration pass book.
2. EMD will have to be credited in the form of Demand Draft / Banker's Cheque / FDR / Irrevocable Bank Guarantee, from any of the Nationalised / Scheduled Banks in favour of the Executive Engineer, PWD Dharwad Division, Dharwad / NSC duly pledged in favour of the Executive Engineer, PWD Dharwad Division, Dharwad and enclosed to the technical bid, failing which, the tender will be rejected.
3. The competent authority reserves the right to reject any / all the tenders without assigning any reason there off duly considering the track record.
4. All the materials / equipments required for the building shall be procured and arranged by the contractor only.
5. Tendering by joint ventures will not be considered.
6. The defect liability period is 5 years from the date of completion.
7. The terms and conditions regarding the contract and to keep the machineries in good condition shall be strictly followed as enclosed.
8. The validity period of EMD shall cover the minimum validity period of 180 days.
9. For any further details / clarifications regarding the work and the terms and conditions of the tender can be obtained from this office during the office hours from the date of Notification.
10. The pre-bid meeting will be conducted by the Chief Engineer, C & B (North) Dharwad, after issue of blank tender forms and the date of pre-bid meeting will be intimated to all the applicants.
11. The contractor who quotes 25% below the notified rate in the tender should remitt the difference amount of tender before executing the agreement, otherwise the tender will be rejected and forfeiting the EMD.
12. The contractor has to complete the form PWG-65 and PWG-66 by filling up all the details duly affixing his signature.
13. Agencies are not permitted to sub let a part or whole work to any other agency for construction.
14. The agency should not have incurred loss during last three years. A certificate should be produced from a Chartered Accountant in this regard.

**II Technical Bid: (Cover-1)**

1. The Contractor should submit the following documents in duplicate duly superscribing on the cover as **Cover-I-Technical Bid.**
2. Contractor should submit the **Work Done Certificate** as enclosed to the document (a certificate issued by the competent authority, not below the rank of Executive Engineer) for having completed building work satisfactorily (which includes civil works, water supply and sanitary arrangement work and electrical works) of similar nature, costing not less than 60% of the amount put to tender in single agreement in any two consecutive financial years during last 5 years i.e. from 2001-02 to 2005-06.

3. The applicant should have a financial turn over of at least to the extent of Rs.15.00 crores every year, in any three financial years during the last 5 financial years i.e., from 2001-02 to 2005-06. A certificate to this effect from a Chartered Accountant to be enclosed.
4. Solvency / Line of Credit certificate issued by any Scheduled / Nationalised Bank for 50% of the amount put to tender shall be enclosed.
5. Certificate towards availability of credit / over draft facilities from any Scheduled / Nationalised Bank for 15% of the amount put to tender shall be enclosed.
6. Details of Bio-Data of technical staff with their qualification certificate along with electrical licence holder & should produce a letter of acceptance to execute the electrification works of this quantum and staff list to be engaged should be enclosed.
7. All documents shall be attested by a District level officer, otherwise the tender will not be considered for evaluation.
8. A certificate from an officer not below the rank of Executive Engineer, regarding working condition of the ready mix concrete plant of required capacity, construction plant and machineries with power driven as per the list of machineries given in the blank tender document should be enclosed. The ownership of all the machineries as per the list enclosed should be enclosed in the Technical bid.

**III. Financial Bid: (Cover-2)**

1. The rates must be quoted in figures and words both in original and duplicate in Schedule-B and the lowest quoted rates will be considered for evaluation.
2. The sealed cover containing Schedule-B in duplicate shall be supersonbed on the cover as Financial Bid-(Cover-2).

Executive Engineer,
PR- 222 P.W.D. Dharwad Dn, Dharwad.

**ರೇಷ್ಮೆ ಇಲಾಖೆ**

**ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಕಛೇರಿ, ಬೆಂಗಳೂರು**

**ಅಧಿಸೂಚನೆ ಸಂಖ್ಯೆ: ಸಿ1(6):ರೇನಿ:20:ಬ್ಯಾಕ್‌ಲಾಗ್:2001-02, ದಿನಾಂಕ: 25ನೇ ಮಾರ್ಚ್ 2006**

ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಸಿ1(6):ರೇನಿ:20:ಬ್ಯಾಕ್‌ಲಾಗ್:2001-02, ದಿನಾಂಕ: 27.04.2005 ರಲ್ಲಿ ರೇಷ್ಮೆ ಇಲಾಖೆಯಲ್ಲಿ ಖಾಲಿ ಇರುವ 06 ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಪರಿಶಿಷ್ಟ ಜಾತಿಗೆ ಸೇರಿದ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಕರ್ನಾಟಕ ರಾಜ್ಯ ನಾಗರೀಕ ಸೇವಾ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಮೀಸಲಿರಿಸಿದ ತುಂಬದೆ ಇರುವ ಖಾಲಿ ಹುದ್ದೆಗಳು) (ವಿಶೇಷ ನೇಮಕಾತಿ) ನಿಯಾಮಗಳು 2001ರ ಅಡಿಯಲ್ಲಿ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಅಧಿಸೂಚನೆ ಸಂಖ್ಯೆ: ಸಿಬ್ಬಂದಿ1(6):ರೇನಿ:20:ಬ್ಯಾಕ್‌ಲಾಗ್:2001-02, ದಿನಾಂಕ: 07.11.2005 ರಲ್ಲಿ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿ, ಆ ಆಯ್ಕೆ ಪಟ್ಟಿಯಿಂದ ಬಾಧಿತರಾಗುವ ಅಭ್ಯರ್ಥಿಗಳು ತಮ್ಮ ಆಕ್ಷೇಪಣೆಗಳನ್ನು ದಿನಾಂಕ: 15.12.2005 ರೊಳಗಾಗಿ ಸಲ್ಲಿಸಬಹುದೆಂದು ಸೂಚಿಸಲಾಗಿತ್ತು. ನಿಗದಿತ ಅವಧಿಯೊಳಗೆ ಶ್ರೀಮತಿ ಕೆ.ಎಲ್. ಪ್ರೇಮಸುಧಾ ಎಂಬ ಅಭ್ಯರ್ಥಿ ಆಕ್ಷೇಪಣೆ ಸಲ್ಲಿಸಿದ್ದು, ನಿಯಮಾನುಸಾರವಾಗಿ ಪರಿಶೀಲಿಸಿದೆ. ಆಕ್ಷೇಪಣೆಯ ಅರ್ಜಿಯಲ್ಲಿ ಮಾಡಿದ ಅಂಶಗಳ ಕುರಿತು ಸರ್ಕಾರದಿಂದ ಸ್ಪಷ್ಟೀಕರಣ ಪಡೆಯಲಾಗಿದೆ. ಆಕ್ಷೇಪಣೆಯಲ್ಲಿ ವ್ಯಕ್ತ ಪಡಿಸಿರುವ ಅಂಶಗಳು ನಿಯಮಾನುಸಾರ ಪರಿಗಣನೆಗೆ ಅರ್ಹವಿರುವುದಿಲ್ಲವಾದ್ದರಿಂದ ಆಕ್ಷೇಪಣೆಯನ್ನು ತಳ್ಳಿಹಾಕಿದೆ. ಸದರಿ ನಿಯಮಗಳ ನಿಯಮ-06 ರನ್ವಯ ಕೆಳಕಂಡಂತೆ ಅಂತಿಮ ಆಯ್ಕೆ ಪಟ್ಟಿಯನ್ನು ಅಭ್ಯರ್ಥಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ಮುಖ್ಯಪಟ್ಟಿ**

| ಕ್ರ. ಸಂ. | ಅಭ್ಯರ್ತಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ ಮತ್ತು ಶೇಕಡ ಅಂಕಗಳ ಸರಾಸರಿ | ಹುದ್ದೆಗಳ ಮೀಸಲಾತಿ ವರ್ಗೀಕರಣ |
|---|---|---|---|---|
| 1 | 2 | 3 | 4 | 5 |
| 1 | ಸುಭಾಶ್ಚಂದ್ರ<br>ಹುಸನಪ್ಪ ಇಳಕಲ್<br>ನಂ.2/907, 42/ಎ, ಆಂಜನೇಯ ನಗರ, ಆರ್‌ಟಿಓ ಎದುರು,<br>ಸೇಡಂ ರಸ್ತೆ, ಗುಲ್ಬರ್ಗಾ-585105. | 06.01.1974 | ಎಸ್‌ಎಸ್‌ಎಲ್‌ಸಿ ಹಿ.ಕನ್ನಡ<br>ಬೆರಳಚ್ಚು<br>75.92 | ಸಾಮಾನ್ಯ |
| 2 | ಸಿ.ಕೆ. ತ್ರಿವೇಣಿ<br>ಕೆ.ಬಿ. ಚಲವಾದಿ<br>ನಂ.28, ಸೆಕ್ಟರ್ 5, ಶ್ರೀನಗರ, ಮಾಳಮಾರುತಿ ಬಡಾವಣೆ,<br>ಬೆಳಗಾವಿ-570016. | 21.02.1976 | ಎಸ್‌ಎಸ್‌ಎಲ್‌ಸಿ ಹಿ.ಕನ್ನಡ<br>ಬೆರಳಚ್ಚು<br>70.17 | ಮಹಿಳೆ |

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ ಮತ್ತು ಶೇಕಡ ಅಂಕಗಳ ಸರಾಸರಿ | ಹುದ್ದೆಗಳ ಮೀಸಲಾತಿ ವರ್ಗೀಕರಣ |
|---|---|---|---|---|
| 3 | ಕೃಷ್ಣಕುಮಾರ ಬುದ್ನಿ<br>ಕರಿಯಪ್ಪ ಬುದ್ನಿ<br>ಹೂವಿನಹಿಪ್ಪರಗಿ, ತಾ:ಬಸವನಬಾಗೇವಾಡಿ, ಜಿ:ವಿಜಾಪುರ<br>ಪಿನ್-586208 | 06.01.1975 | ಎಸ್‌ಎಸ್‌ಎಲ್‌ಸಿ ಹಿ.ಕನ್ನಡ<br>ಬೆರಳಚ್ಚು<br>66.25 | ಗ್ರಾಮೀಣ |
| 4 | ಎಸ್. ಮಹದೇವಸ್ವಾಮಿ<br>ಶಿವಮಾಧು<br>ನಂ.28, ಎನ್‌ಆರ್ ಮಹಲ್, ನ್ಯೂ ಲೇಔಟ್, ರಾಜೇಂದ್ರ<br>ನಗರ, ಮೈಸೂರು-570007. | 06.05.1974 | ಎಸ್‌ಎಸ್‌ಎಲ್‌ಸಿ ಹಿ.ಕನ್ನಡ<br>ಬೆರಳಚ್ಚು<br>69.58 | ಸಾಮಾನ್ಯ |
| 5 | ಎಂ.ಕೆ. ನಿರ್ಮಲ<br>ಲೇಟ್ ಕೃಷ್ಣಪ್ಪ<br>ನಂ.161, ಕುವೆಂಪು ನಗರ, ಪುಷ್ಪಪಾಂಡುರಂಗ ಕಲ್ಯಾಣ<br>ಮಂಟಪ ಎದುರು, ಮಂಡ್ಯ | 12.12.1974 | ಎಸ್‌ಎಸ್‌ಎಲ್‌ಸಿ ಹಿ.ಕನ್ನಡ<br>ಬೆರಳಚ್ಚು<br>69.25 | ಮಹಿಳೆ |
| 6 | ಮಲ್ಲಿಕಾರ್ಜುನ ಕೆಂಬಾವಿ<br>ಶಿವಶಂಕರ<br>ಅಂಚೆ: ಮಣ್ಣೂರು, ತಾ: ಸಿಂಧಗಿ, ಜಿ: ವಿಜಾಪುರ | 27.07.1974 | ಎಸ್‌ಎಸ್‌ಎಲ್‌ಸಿ ಹಿ.ಕನ್ನಡ<br>ಬೆರಳಚ್ಚು<br>66.08 | ಗ್ರಾಮೀಣ |

**ಹೆಚ್ಚುವರಿ ಪಟ್ಟಿ**

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ ಮತ್ತು ಶೇಕಡ ಅಂಕಗಳ ಸರಾಸರಿ | ಹುದ್ದೆಗಳ ಮೀಸಲಾತಿ ವರ್ಗೀಕರಣ |
|---|---|---|---|---|
| 1 | 2 | 3 | 4 | 5 |
| 1 | ಕೆ.ಎಲ್. ಪ್ರಮಸುಧಾ<br>ಕೆ.ಪಿ. ಲಕ್ಷಪ್ಪ<br>ನಂ.8ಬಿ, ಪುಟ್ಟೇನಹಳ್ಳಿ, ಕೆಹೆಚ್‌ಬಿ ಲೇಔಟ್, ಯಲಹಂಕ,<br>ಬೆಂಗಳೂರು-64 | 06.05.1975 | ಎಸ್‌ಎಸ್‌ಎಲ್‌ಸಿ ಹಿ.ಕನ್ನಡ<br>ಬೆರಳಚ್ಚು<br>68.75 | ಸಾಮಾನ್ಯ |
| 2 | ಬಿ.ಸಿ. ಲಕ್ಷ್ಮಿ<br>ಬಿ. ಚನ್ನಬಸಪ್ಪ<br>ನಂ.ಬಿ14, ಎನ್‌ಜಿಓಎಸ್ ಕ್ವಾಟರ್ಸ್, ಬಿ-ಬ್ಲಾಕ್, 6ನೇ<br>ಬ್ಲಾಕ್, ರಾಜಾಜೀನಗರ, ಬೆಂಗಳೂರು-10 | 12.07.1973 | ಎಸ್‌ಎಸ್‌ಎಲ್‌ಸಿ ಹಿ.ಕನ್ನಡ<br>ಬೆರಳಚ್ಚು<br>67.08 | ಮಹಿಳೆ |
| 3 | ಪದ್ಮಾವತಿ<br>ಮುರುಗೇಶ್<br>ಕುಲಸಚಿವರ ಕಛೇರಿ, (ಗಂಡ ಸ್ವಾಮಿನಾಥನ್)<br>ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು ಗಂಗೋತ್ರಿ<br>ಪಿನ್-574199 | 20.07.1975 | ಎಸ್‌ಎಸ್‌ಎಲ್‌ಸಿ ಹಿ.ಕನ್ನಡ<br>ಬೆರಳಚ್ಚು<br>64.00 | ಗ್ರಾಮೀಣ |
| 4 | ಸಂತೋಷಕುಮಾರ್<br>ಬನ್ನಪ್ಪ<br>ನಂ.331, ಗೌರಮ್ಮ ನಿಲಯ, ಸಿಐಬಿ ಕಾಲೋನಿ, ಅಂಬೇಡ್ಕರ್<br>ನಗರ, ಗುಲ್ಬರ್ಗಾ. | 01.06.1973 | ಎಸ್‌ಎಸ್‌ಎಲ್‌ಸಿ ಹಿ.ಕನ್ನಡ<br>ಬೆರಳಚ್ಚು<br>68.08 | ಸಾಮಾನ್ಯ |
| 5 | ರೇಣುಕಾ ಬರಮಪ್ಪ ಭಜಂತ್ರಿ<br>ಬರಮಪ್ಪ ಭಜಂತ್ರಿ<br>ಕೇರ್ ಆಫ್ ಚಂದ್ರಕಾಂತ ಭಜಂತ್ರಿ, ನಂ.ಸಿ1, ರಾಜಭವನಾ<br>ಕ್ವಾಟರ್ಸ್, ರಾಜಭವನ್, ಬೆಂಗಳೂರು-1. | 20.07.1974 | ಎಸ್‌ಎಸ್‌ಎಲ್‌ಸಿ ಹಿ.ಕನ್ನಡ<br>ಬೆರಳಚ್ಚು<br>66.55 | ಮಹಿಳೆ |
| 6 | ಸಿ. ಅಂಜನಮೂರ್ತಿ<br>ಚಿಕ್ಕಹನುಮಪ್ಪ<br>ನಲ್ಲೇಕಾಮನಹಳ್ಳಿ, ಅಂಚೆ: ಬೇಡತ್ತೂರು, ತಾ: ಮಧುಗಿರಿ,<br>ಜಿ: ತುಮಕೂರು. | 30.03.1969 | ಎಸ್‌ಎಸ್‌ಎಲ್‌ಸಿ ಹಿ.ಕನ್ನಡ<br>ಬೆರಳಚ್ಚು<br>63.25 | ಗ್ರಾಮೀಣ |

ಆಯ್ಕೆ ಪ್ರಾಧಿಕಾರ,

ಪಿ.ಆರ್. 228 ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು.

ಕರ್ನಾಟಕ ಅರಣ್ಯ ಇಲಾಖೆ

ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು

ಅಲ್ಪಾವಧಿ ಟೆಂಡರ್ ಪ್ರಕಟಣೆ

**ಸಂಖ್ಯೆಃ ಎ7.ಕೆರೆ.ಜರಗನಹಳ್ಳಿಸಿಆರ್- /05-06 ದಿನಾಂಕ: 26ನೇ ಏಪ್ರಿಲ್ 2006**

**ವಿಷಯಃ-** 2006-07ನೇ ಸಾಲಿಗೆ ಬೆಂಗಳೂರು ನಗರ ವಿಭಾಗದ ವ್ಯಾಪ್ತಿಯಲ್ಲಿರುವ ಜರಗನಹಳ್ಳಿ ಕೆರೆ ಅಭಿವೃದ್ಧಿ ಕಾಮಗಾರಿ ಬಗ್ಗೆ.

**ಉಲ್ಲೇಖಃ-** ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕೆರೆಗಳ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ರವರ ಪತ್ರ ಸಂಖ್ಯೆಃ LDA.CEO.JAR.120.LAK/02-03/06 ದಿನಾಂಕಃ 12.04.06

ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ ವ್ಯಾಪ್ತಿಯ ಜರಗನಹಳ್ಳಿ ಕೆರೆಯ ಅಭಿವೃದ್ಧಿ ಪಡಿಸುವುದರ ಬಗ್ಗೆ ಈ ವಿಭಾಗದಿಂದ 2006-07ನೇ ಸಾಲಿನಲ್ಲಿ ನೊಂದಾಯಿತ ಪ್ರಥಮ ದರ್ಜೆ ಖಾಸಗಿ ಗುತ್ತಿಗೆದಾರ ಲೋಕೋಪಯೋಗಿ/ಬೆಂಗಳೂರು ನೀರು ಸರಬರಾಜು ಒಳಚರಂಡಿ ಮಂಡಳಿ/ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ/ಬೆಂಗಳೂರು ಮಹಾನಗರ ಪಾಲಿಕೆ/ಸಣ್ಣ ನೀರಾವರಿ/ಅರಣ್ಯ ಇಲಾಖೆ/ಸರ್ಕಾರಿ ಸೌಮ್ಯದ ಇತರೆ ಇಲಾಖೆ ಗುತ್ತಿಗೆದಾರರಿಂದ ದಿನಾಂಕಃ 08.05.2006 ರಂದು ಮೊಹರಾದ ಟೆಂಡರ್ ಕರೆಯಲಾಗಿದೆ. ಟೆಂಡರ್‌ನ್ನು ದಿನಾಂಕಃ 08.05.2006ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಒಂದು ವೇಳೆ ದಿನಾಂಕಃ 08.05.2006ರಂದು ಯಾವ ಟೆಂಡರ್‌ದಾರರು ಟೆಂಡರ್‌ನಲ್ಲಿ ಭಾಗವಹಿಸದಿದ್ದಲ್ಲಿ ಇದನ್ನೇ ಮರು ಟೆಂಡರ್ ಪ್ರಕಟಣೆ ಎಂದು ಪರಿಗಣಿಸಿ ದಿನಾಂಕಃ09.05.2006ರಂದು ಸಂಜೆ 4.00 ಗಂಟೆಗೆ ಮೊಹರಾದ ಟೆಂಡರ್ ಸ್ವೀಕರಿಸಲಾಗುವುದು. ಟೆಂಡರ್ ಫಾರಂನ್ನು ದಿನಾಂಕಃ08.05.2006 ಮತ್ತು 09.05.2006ರಂದು ಈ ಕಛೇರಿಯಲ್ಲಿ ಕಛೇರಿ ಕೆಲಸದ ದಿನ ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 1.00 ಗಂಟೆಯವರೆಗೆ ಪಡೆಯಬಹುದಾಗಿರುತ್ತದೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ಸ್ಥಳ | ಕೆಲಸದ ವಿವರ | ಅಂದಾಜು ವೆಚ್ಚ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. (ಇಡಿಗಂಟು) |
|---|---|---|---|---|
| | | **"ಜರಗನಹಳ್ಳಿ ಕೆರೆ"** | | |
| 1 | **ಜರಗನಹಳ್ಳಿ ಕೆರೆ** | A. Embankment for Formation of jogging path all round the tank | ರೂ.1.69 | ರೂ.0.169 |
| 2 | ---"--- | A. Formation of Lawn and Rockery Northern Side - I and Southern Side - II<br>B. Raising of Live hedge along the Jogging / Walking Path | ರೂ.2.59 | ರೂ.0.259 |
| 3 | ---"--- | A. Providing Chainlink Mesh in the left out areas<br>B. Construction of Parapet Wall | ರೂ.3.95 | ರೂ.0.395 |
| 4 | ---"--- | A. Laying of water pipes<br>B. Providing Hume Pipe culvert at wetland | ರೂ.1.80 | ರೂ.0.180 |

ನಿಬಂಧನೆಗಳು

1. ಟೆಂಡರ್‌ದಾರರು 2006-07ನೇ ಸಾಲಿನಲ್ಲಿ ನೋಂದಾಯಿಸಲ್ಪಟ್ಟ ಪ್ರಥಮ ದರ್ಜೆ ಖಾಸಗಿ ಗುತ್ತಿಗೆದಾರ ಲೋಕೋಪಯೋಗಿ/ಬೆಂಗಳೂರು ನೀರು ಸರಬರಾಜು ಒಳಚರಂಡಿ ಮಂಡಳಿ/ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ/ಬೆಂಗಳೂರು ಮಹಾನಗರ ಪಾಲಿಕೆ/ಸಣ್ಣ ನೀರಾವರಿ/ಅರಣ್ಯ ಇಲಾಖೆ/ಸರ್ಕಾರಿ ಸೌಮ್ಯದ ಇತರೆ ಇಲಾಖೆ ಗುತ್ತಿಗೆದಾರರಾಗಿರಬೇಕು.
2. ಟೆಂಡರ್ ಫಾರಂಗಳನ್ನು ರೂ 2.00 ಕೋರ್ಟ್ ಫೀ ಸ್ಟ್ಯಾಂಪ್ ಹಚ್ಚಿದ ಹಾಗೂ ಅಂದಾಜು ವೆಚ್ಚದ ಶೇಕಡ 2.50 ಇ.ಎಂ.ಡಿ. ಹಣವನ್ನು (ಮೇಲಿನ ಷೆಡ್ಯೂಲ್‌ನಲ್ಲಿ ವಿವರಿಸಿದಂತೆ) ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರ ಹೆಸರಿನಲ್ಲಿ ಡಿ.ಡಿ. ಪಡೆದು ಟೆಂಡರ್ ಫಾರಂ ಜೊತೆ ಲಗತ್ತಿಸಬೇಕು.
3. ಟೆಂಡರ್ ಫಾರಂಗಳನ್ನು ಸೀಲು ಮಾಡಿದ ಲಕೋಟೆಯಲ್ಲಿಟ್ಟು ಷೆಡ್ಯೂಲ್‌ನಲ್ಲಿ ವಿವರಿಸಿದ ಕಾಮಗಾರಿಗಳಿಗೆ ಪ್ರತ್ಯೇಕವಾಗಿ ಸಲ್ಲಿಸತಕ್ಕದ್ದು.
4. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ಟೆಂಡರ್ ಪ್ರಕಟಣೆಯಲ್ಲಿ ತಿಳಿಸಿರುವಂತೆ ಆಯಾ ದಿನಾಂಕಗಳಂದು ಕಛೇರಿ ವೇಳೆಯಲ್ಲಿ ಕೊಡಲಾಗುವುದು. ಟೆಂಡರ್ ಫಾರಂ ರೂ.200/- (ತೆರಿಗೆಗಳು ಪ್ರತ್ಯೇಕ)
5. ದಿನಾಂಕಃ 08.05.2006 ಮತ್ತು 09.05.2006ರ ಸಂಜೆ 4.00 ಗಂಟೆ ವೇಳೆಯವರೆಗೆ ಟೆಂಡರ್‌ನ್ನು ಈ ಕಛೇರಿಯಲ್ಲಿ ಅದಕ್ಕೆಂದೇ ಇಟ್ಟಿರುವ ಟೆಂಡರ್ ಪಟ್ಟಿಗೆಯಲ್ಲಿ ಹಾಕಬೇಕು.
6. ದಿನಾಂಕಃ 08.05.2006 ಮತ್ತು 09.05.2006ರ ಸಂಜೆ 5.00 ಗಂಟೆಗೆ ಹಾಜರಿರುವ ಗುತ್ತಿಗೆದಾರರ/ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.
7. ಟೆಂಡರ್‌ಗಳನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಅಥವಾ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ವೃತ್ತ, ಬೆಂಗಳೂರು ಇವರಿಗೆ ಇರುತ್ತದೆ. ತಿರಸ್ಕೃತ ಟೆಂಡರ್‌ಗಳಿಗೆ ಕಾರಣ ನೀಡಲಾಗುವುದಿಲ್ಲ.

8. ಯಶಸ್ವಿ ಟೆಂಡರ್‌ದಾರರು ಕೆಲಸದ ಆದೇಶ ಕೊಟ್ಟ ಮೂರು ದಿನಗಳೊಳಗೆ ಈ ಕಛೇರಿಯಲ್ಲಿ ರೂ. 200/-ರ ಛಾಪಾ ಕಾಗದದ ಮೇಲೆ ಕರಾರು ಮಾಡಿಕೊಟ್ಟು ಕೆಲಸದ ಆದೇಶ ಪಡೆಯುವುದು.
9. ಗುತ್ತಿಗೆದಾರರು ಮಾಡಬಹುದಾದ ಯಾವ ಷರತ್ತುಗಳನ್ನು ಅಂಗೀಕರಿಸುವುದಿಲ್ಲ.
10. ಇಎಂಡಿ ಹಣವನ್ನು ಯಶಸ್ವಿ ಟಂಡರ್‌ದಾರರಿಗೆ ಟೆಂಡರ್ ಕ್ರಮ ಮುಗಿದ ನಂತರ ಚೆಕ್ ಮೂಲಕ ಹಿಂದಿರುಗಿಸಲಾಗುವುದು.
11. ಪ್ರತಿ ಬಿಲ್‌ನಲ್ಲಿ ಶೇಕಡ 2% ರಷ್ಟನ್ನು ಆಧಾಯ ತೆರಿಗೆ ಹಾಗೂ ಅದರ ಮೇಲೆ ಚಾಲ್ತಿಯಲ್ಲಿರುವ ಸರ್ಚಾಜನ್ನು ತೆರಿಗೆಯಾಗಿ ನಿಯಮಾನುಸಾರ ಹಿಡಿಯಲಾಗುವುದು.
12. ಈ ಗುತ್ತಿಗೆಯ ಬಗ್ಗೆ ಯಾವುದಾದರೂ ತಂಟೆ ತಕರಾರು ಬಂದರೆ ಅರಣ್ಯ ಸಂರಕ್ಷಣಾಧಿಕಾರಿಗಳು ಬೆಂಗಳೂರು ವೃತ್ತ, ಬೆಂಗಳೂರು ಇವರ ನಿರ್ದಾರವೇ ಅಂತಿಮ ನಿರ್ಧಾರವಾಗಿರುತ್ತದೆ.
13. ಟೆಂಡರ್‌ದಾರರು ಅಂದಾಜು ಪಟ್ಟಿಯಲ್ಲಿ ನಮೂದಿಸಿರುವ ದರಗಳಿಗೆ ಲೋಕೋಪಯೋಗಿ/ಬೆಂಗಳೂರು ನೀರು ಸರಬರಾಜು ಒಳಚರಂಡಿ ಮಂಡಳಿ/ಸಣ್ಣ ನೀರಾವರಿ/ ಅರಣ್ಯ ಇಲಾಖೆ/ತೋಟಗಾರಿಕೆ ಇಲಾಖೆ 2005-06ನೇ ಸಾಲಿನ ದರಕ್ಕಿಂತ ಎಷ್ಟು ಹೆಚ್ಚು ಅಥವಾ ಎಷ್ಟು ಕಡಿಮೆ ಎಂಬುದನ್ನು ನಮೂದಿಸಬೇಕು.
14. ಕೆಲಸದ ಆದೇಶ ನೀಡಿದ ದಿನಾಂಕದಿಂದ 30 (ಮೂವತ್ತು) ದಿನಗಳೊಳಗೆ ಕೆಲಸವನ್ನು ಪೂರೈಸತಕ್ಕದ್ದು.
15. ಗುತ್ತಿಗೆ ಪಡೆದ ಮೂವತ್ತು ದಿನಗಳೊಳಗೆ ಕೆಲಸ ಪೂರೈಸದಿದ್ದಲ್ಲಿ ಗುತ್ತಿಗೆದಾರರ ಸ್ವಂತ ಜವಾಬ್ದಾರಿ ಮತ್ತು ಖರ್ಚಿನಲ್ಲಿ ಸದರಿ ಕೆಲಸವನ್ನು ಬೇರೆ ಗುತ್ತಿಗೆದಾರರಿಗೆ ವಹಿಸಿ ಪೂರೈಸಲು ಅಥವಾ ಇಲಾಖಾ ಮೂಲಕ ಪೂರೈಸಲು ಸಂಪೂರ್ಣ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರಿಗೆ ಇರುತ್ತದೆ.
16. ಗುತ್ತಿಗೆದಾರರು ನಿಗಧಿತ ಅವಧಿಯಲ್ಲಿ ಕಾಮಗಾರಿ ಪೂರೈಸದಿದ್ದಲ್ಲಿ ಮತ್ತು ಅರ್ಧಕ್ಕೆ ನಿಲ್ಲಿಸಿದಲ್ಲಿ ಗುತ್ತಿಗೆದಾರರು ಪೂರೈಸಿದ ಕಾಮಗಾರಿಗೆ ಹಣ ಪಾವತಿಗೆ ಅರ್ಹರಿರುವುದಿಲ್ಲ.
17. ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಪರಿಶೀಲಿಸಿ ಪ್ರಮಾಣೀಕರಿಸಿದ ನಂತರ ಬಿಲ್ಲಿನ ಹಣ ಪಾವತಿಸಲಾಗುವುದು.
18. ಉಪ ಅರಣ್ಯ ಸಂರಕ್ಷಣಾಧಿಕಾರಿ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿ ಅಥವಾ ಪ್ರತಿನಿಧಿ ಸದರಿ ಕೆಲಸವನ್ನು ಅವರು ನೋಡ ಬಯಸಿದ್ದಲ್ಲಿ ಅದಕ್ಕೆ ಅನುವು ಮಾಡಿಕೊಡಬೇಕು.
19. ಟೆಂಡರ್‌ದಾರರು ನಿರ್ವಹಿಸಿದ ಕೆಲಸಗಳ ಪೈಕಿ ಕೆರೆಯ ಅಭಿವೃದ್ಧಿ ಯಾವುದೇ ಕೆಲಸ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ತೃಪ್ತಿಕರವಾಗದೇ ಇದ್ದಲ್ಲಿ ಆ ಕೆಲಸಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ತೀರ್ಮಾನದಂತೆ ಹಣ ಪಾವತಿ ಮಾಡಲಾಗುವುದು.
20. ಟೆಂಡರುದಾರರಿಗೆ ನೀಡಲಾದ ಮಾದರಿ ಮತ್ತು ವಿವರಣೆಯಲ್ಲಿ ಬದಲಾವಣೆಗಳನ್ನು ಮಾಡಲು ಉಪ ಅರಣ್ಯ ಸಂರಕ್ಷಣಾಧಿಕಾಗಳಿಗೆ ಅಧಿಕಾರವಿರುತ್ತದೆ. ಈ ಬದಲಾವಣೆಗಳಿಂದ ಕರಾರು ಒಪ್ಪಂದ ಅನೂರ್ಜಿತಗೊಳ್ಳುವುದಿಲ್ಲ.
21. ಕೆಲಸದಲ್ಲಿ ಏನಾದರೂ ಬದಲಾವಣೆ ಮಿತಿಗೊಳಿಸಿದಲ್ಲಿ ಟೆಂಡರುದಾರರು ಕ್ಲೈಮ್ ಮಾಡಬಹುದಾದ ಯಾವುದೇ ರೀತಿಯ ಪರಿಹಾರವನ್ನು ನೀಡಲು ಇಲಾಖೆ ಬದ್ದವಾಗಿರುವುದಿಲ್ಲ.
22. ಲೋಕೋಪಯೋಗಿ/ಬೆಂಗಳೂರು ನೀರು ಸರಬರಾಜು ಒಳಚರಂಡಿ ಮಂಡಳಿ/ಸಣ್ಣ ನೀರಾವರಿ/ ಅರಣ್ಯ ಇಲಾಖೆ/ತೋಟಗಾರಿಕೆ ಇಲಾಖೆ ದರಪಟ್ಟಿಯಲ್ಲಿ ನಮೂದಿಸಿರುವಂತೆ, ಉತ್ತಮ ಗುಣಮಟ್ಟದ ಸಾಮಾಗ್ರಿಗಳನ್ನು ಮಾತ್ರ ಕೆರೆ ಅಭಿವೃದ್ಧಿ ಕೆಲಸಕ್ಕೆ ಉಪಯೋಗಿಸಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿ
ಬೆಂಗಳೂರು ನಗರ ವಿಭಾಗ, ಬೆಂಗಳೂರು.

ಪಿ.ಆರ್. 230

## ಕಾರ್ಯನಿರ್ವಾಹಕ ಇಂಜಿನಿಯರ್‌ರವರ ಕಛೇರಿ, ಲೋಕೋಪಯೋಗಿ ಇಲಾಖೆ ವಿಭಾಗ, ತುಮಕೂರು

## ಸಂಕ್ಷಿಪ್ತ ಟೆಂಡರು ಪ್ರಕಟಣೆ (ದ್ವಿ ಲಕೋಟೆ ಪದ್ಧತಿ)

**ಸಂಖ್ಯೆ: ಕಾನಿಇಂ:ಲೋಇವಿ:ತು:ಡಿಬಿ-1:ಟೆಂಡರ್-2/2006-07, ದಿನಾಂಕ: 15ನೇ ಏಪ್ರಿಲ್ 2006**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿನ ಪಾರದರ್ಶಕತೆಯ ಅಧ್ಯಾದೇಶ 2000 ರಂತೆ ಹಾಗೂ ಲೋಕೋಪಯೋಗಿ ಇಲಾಖೆ ಸಂಹಿತೆ ಭಾಗ-11 ಪಿಡಬ್ಲ್ಯೂಜಿ-65 ನಿಬಂಧನೆಗೊಳಪಟ್ಟು ಅರ್ಹ ದರ್ಜೆಯ ಲೋಕೋಪಯೋಗಿ ಇಲಾಖೆಯ ನೋಂದಾಯಿತ ಗುತ್ತಿಗೆದಾರರುಗಳಿಂದ ಕಾಮಗಾರಿಗಳಿಗೆ ಮೊಹರು ಮಾಡಲಾದ ಎರಡು ಲಕೋಟೆಯ ಪದ್ದತಿಯಂತೆ ಕೆಳಕಂಡ ಕಾಮಗಾರಿಗಳಿಗೆ ಮೊಹರು ಮಾಡಲಾದ ಲಕೋಟೆಯ ಮೇಲೆ ಕಾಮಗಾರಿ ಹೆಸರನ್ನು ನಮೂದಿಸಿದ ಟೆಂಡರುಗಳನ್ನು ದ್ವಿಪ್ರತಿಯಲ್ಲಿ ಕರ್ನಾಟಕ ರಾಜ್ಯಪಾಲರ ಪರವಾಗಿ ಆಹ್ವಾನಿಸಲಾಗಿದೆ. ಕಾಮಗಾರಿಗಳಿಗೆ ಟೆಂಡರು ಸಲ್ಲಿಸಲು ಇಚ್ಛಿಯುಳ್ಳವರು ಮನವಿಯನ್ನು ಕಾಮಗಾರಿಯ ಎದುರು ನಮೂದಿಸಿರುವ ಮೊತ್ತದ ಡಿ.ಡಿ.ಯೊಂದಿಗೆ ಕಾರ್ಯಪಾಲಕ ಇಂಜಿನಿಯರ್, ಲೋ:ಇ: ತುಮಕೂರು ವಿಭಾಗ, ತುಮಕೂರು ರವರ ಹೆಸರಿಗೆ ಜಮಾ ಮಾಡಿದಂತೆ ಕೆಳಗೆ ಸಹಿ ಮಾಡಿರುವ ಕಛೇರಿಗೆ ದಿನಾಂಕ: 15.5.2006 ರಂದು ಸಂಜೆ 5.00 ಗಂಟೆಯೊಳಗಾಗಿ ಮನವಿಯೊಂದಿಗೆ ಸಲ್ಲಿಸತಕ್ಕದ್ದು, ನಂತರ ಬಂದ ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕಾಮಗಾರಿಗೆ ಸಂಬಂಧಿಸಿದ ಮುದ್ರಿತ ದಾಸ್ತಾವೇಜುಗಳು, ಮುದ್ರಿತ ಕರಾರುಗಳು, ರೇಖಾ ಚಿತ್ರಗಳು, ಕಾಮಗಾರಿಗಳ ಪೂರ್ಣ ತಪಶೀಲು ಪರಿಮಾಣ ಇತ್ಯಾದಿಗಳಲ್ಲದೇ ಕರಾರು ಷರತ್ತುಗಳನ್ನೊಳಗೊಂಡ ಟೆಂಡರ್ ದಾಖಲಾತಿಗಾಗಿ ದಿನಾಂಕ: 18.5.2006 ರಂದು ಬೆಳಿಗ್ಗೆ 10.00 ರಿಂದ ಸಂಜೆ 5.00 ಗಂಟೆಯೊಳಗಾಗಿ ಪಡೆಯಬಹುದು ಅಗತ್ಯವಿರುವ ಪೂರ್ವ ಅರ್ಹತೆಗಳನ್ನು ಟೆಂಡರ್ ದಾಸ್ತಾವೇಜುವಿನಲ್ಲಿ ಸವಿವರವಾಗಿ ನಮೂದಿಸಲಾಗಿರುತ್ತದೆ.

ಈ ಕೆಲಸಗಳಿಗೆ ಬೇಕಾದ ಅಗತ್ಯವಾಗಿ ಬೇಕಾಗಿರುವ ಯಂತ್ರೋಪಕರಣಗಳ ಪೈಕಿ ಸ್ವಂತ ಹೊಂದಿರುವ ಅಥವಾ ಹೊಂದಿಸಿಕೊಂಡು ಕೆಲಸ ನಿರ್ವಹಿಸುವಂತಹ ಯಂತ್ರೋಪಕರಣಗಳು ಸೆಂಟ್ರಿಂಗ್ ಸಾಮಾಗ್ರಿಗಳು, ವೈಬ್ರೇಟರ್‌ಗಳು, ಕಾಂಕ್ರೀಟ್ ಮಿಕ್ಸರ್ ಹಾಗೂ ಏರ್ ಕಂಪ್ರೆಸರ್ ಇತರೆ ಅವಶ್ಯಕ ಯಂತ್ರೋಪಕರಣಗಳು ಈ ಯಂತ್ರೋಪಕರಣಗಳು ಚಾಲ್ತಿಯಲ್ಲಿರುವ ಬಗ್ಗೆ ದಾಖಲಾತಿಗಳನ್ನು ಸಕ್ಷಮ ಪ್ರಾಧಿಕಾರದಿಂದ ದೃಢೀಕರಿಸಿ ಅರ್ಜಿ ಸಲ್ಲಿಸುವ ಸಮಯದಲ್ಲೇ ಒದಗಿಸತಕ್ಕದ್ದು, ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಕಾಮಗಾರಿಗೆ ನಿಗದಿಪಡಿಸಿದ ಮುಂಗಡ

ಠೇವಣಿಯನ್ನು ಕರ್ನಾಟಕ ಸರ್ಕಾರದ ಟ್ರೆಜರಿ ಚಲನ್ ಕಾರ್ಯನಿರ್ವಾಹಕ ಇಂಜಿನಿಯರ್‌ರವರ ಹೆಸರಿಗೆ ಜಮಾ ಮಾಡಬಹುದಾದಂತೆ ಡಿಮ್ಯಾಂಡ್ ಡ್ರಾಫ್ಟ್: ಎಫ್‌ಡಿಆರ್: ಬ್ಯಾಂಕರ್ಸ್ ಚೆಕ್ : ಬ್ಯಾಂಕ್ ಗ್ಯಾರಂಟಿ (ರಾಷ್ಟ್ರೀಕೃತ ಬ್ಯಾಂಕುಗಳಿಗೆ ಸಂಬಂಧಪಟ್ಟಿರುವವುಗಳು ಮಾತ್ರ),

ಕಾರ್ಯಪಾಲಕ ಇಂಜಿನಿಯರ್‌ರವರ ಹೆಸರಿನಲ್ಲಿ ಒತ್ತೆ ಇಟ್ಟಿರುವ ಹಾಗೂ ಒತ್ತೆ ಇಡಲಾದ ರಾಷ್ಟ್ರೀಯ ಉಳಿತಾಯ ಪತ್ರಗಳು ಭರ್ತಿ ಮಾಡಿದ ಟೆಂಡರ್‌ನೊಂದಿಗೆ ದಿನಾಂಕ: 22.5.2006 ರಂದು ಸಂಜೆ 4.00 ಗಂಟೆಯೊಳಗಾಗಿ ತುಮಕೂರು ಲೋಕೋಪಯೋಗಿ ಇಲಾಖಾ ವಿಭಾಗ ಕಛೇರಿಯಲ್ಲಾಗಲೀ ಅಥವಾ ಲೋಕೋಪಯೋಗಿ ಇಲಾಖೆ ಬೆಂಗಳೂರು ವೃತ್ತ ಅಧೀಕ್ಷಕ ಇಂಜಿನಿಯರ್‌ರವರ ಕಛೇರಿಯಲ್ಲಾಗಲೀ ಸ್ವೀಕರಿಸಲಾಗುವುದು, ನಿಬಂಧನೆಗಳಿಗೊಳಪಟ್ಟು ಅಥವಾ ಮೇಲಿನ ಯಾವುದೇ ಷರತ್ತುಗಳನ್ನು ಪೂರ್ಣಗೊಳಿಸದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಮೇಲೆ ನಿಗದಿಪಡಿಸಿದ ಯಾವುದೇ ದಿನಾಂಕಗಳಂದು ಸರ್ಕಾರ ರಜಾ ದಿನಗಳೆಂದು ಘೋಷಿಸಲ್ಪಟ್ಟಲ್ಲಿ ಮುಂದಿನ ಕೆಲಸದ ದಿನಗಳನ್ನು ಪರಿಗಣಿಸಲಾಗುವುದು, ಗುತ್ತಿಗೆದಾರರು ಮನವಿ ಪತ್ರದ ಜೊತೆಯಲ್ಲಿ ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಲ್ಪಟ್ಟ ನೋಂದಣಿ ಪತ್ರವನ್ನು ಲಗತ್ತಿಸಬೇಕು.

| ಕ್ರ. ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ಲಕ್ಷ ರೂ.ಗಳಲ್ಲಿ) | ಟೆಂಡರ್‌ಗಿಡುವ ಸರಿಸುಮಾರು ಮೊಬಲಗು (ಲಕ್ಷ ರೂ.ಗಳಲ್ಲಿ) | ಸಲ್ಲಿಸ ಬೇಕಾದ ಠೇವಣಿ ಹಣ | ಕಾಮಗಾರಿ ಪೂರ್ಣಗೊಳಿಸ ಬೇಕಾದ ಕಾಲಾವಧಿ ಮಳೆಗಾಲ ಸೇರಿ | ಅರ್ಹ ದರ್ಜೆ ಗುತ್ತಿಗೆ ದಾರರು | ಟೆಂಡರ್ ಫಾರಂ ಬೆಲೆ, ತೆರಿಗೆ, (ಫಾರಂ ಬೆಲೆ ಹಿಂದಿರುಗಿಸ ಲಾಗುವುದಿಲ್ಲ) |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | **ಐಟಂವಾರು ಟೆಂಡರು** | | | | | | |
| 1 | ತುಮಕೂರು ನಗರದ ಖಾಸಗಿ ಬಸ್ ನಿಲ್ದಾಣದ ಪುನರ್ ನಿರ್ಮಾಣ ಹಾಗೂ ವಾಣಿಜ್ಯ ಸಂಕೀರ್ಣ ಕಟ್ಟಡ ನಿರ್ಮಾಣ ಕಾಮಗಾರಿ. | 485.00 | 335.00 | 335000 | 18 ತಿಂಗಳು | 1ನೇ ದರ್ಜೆ | 33500 + ತೆರಿಗೆಗಳು |

**ಟೆಂಡರು ದಾಸ್ತಾವೇಜು ಸಲ್ಲಿಕೆಗೆ ನಿಗದಿಪಡಿಸಿರುವ ದಿನಾಂಕಗಳು**

1. ಖಾಲಿ ಟೆಂಡರ್ ಫಾರಂಗೆ ಮನವಿಯನ್ನು ಸಲ್ಲಿಸುವ ಕೊನೆಯ ದಿನಾಂಕ: 15.5.2006ರ ಸಂಜೆ 5.00 ಗಂಟೆವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ಗುತ್ತಿಗೆದಾರರಿಗೆ ನೀಡಲು ಕೊನೆಯ ದಿನಾಂಕ: 18.5.2006ರ ಸಂಜೆ 5.00 ಗಂಟೆಯವರೆಗೆ
3. ತಾಂತ್ರಿಕ ಮತ್ತು ಆರ್ಥಿಕ ಬಿಡ್‌ಗಳನ್ನು ಕಛೇರಿಗೆ ಸಲ್ಲಿಸಲು ಕೊನೆಯ ದಿನಾಂಕ: 22.5.2006ರ ಸಂಜೆ 4.00 ಗಂಟೆಯವರೆಗೆ
4. ತಾಂತ್ರಿಕ ಬಿಡ್‌ಗಳನ್ನು ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿಯಲ್ಲಿ ತೆರೆಯುವ ದಿನಾಂಕ: 22.5.2006ರ ಸಂಜೆ 5.00 ಗಂಟೆಗೆ ಅಥವಾ ಮುಂದಿನ ಸೂಕ್ತವಾದ ದಿನಾಂಕದಂದು ತೆರೆಯಲಾಗುವುದು.

**ವಿಶೇಷ ಸೂಚನೆಗಳು**

1. ಯಾವ ಕಾರಣವನ್ನೂ ಸಹಾ ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ನಿರಾಕರಿಸುವ ಅಧಿಕಾರವನ್ನು ಟೆಂಡರ್ ಸ್ವೀಕರಿಸುವ ಅಧಿಕಾರಿಯವರು ಕಾದಿರಿಸಿಕೊಂಡಿರುತ್ತಾರೆ.
2. ಮೇಲೆ ನಮೂದಿಸಿರುವ ಷರತ್ತುಗಳಿಗನುಗುಣವಾಗಿ ಮುಂಗಡ ಠೇವಣಿ ಸಲ್ಲಿಸದೇ ಇರುವ ಟೆಂಡರ್‌ಗಳನ್ನು ನೇರವಾಗಿ ತಿರಸ್ಕರಿಸಲಾಗುವುದು.
3. ಖಾಲಿ ಟೆಂಡರ್ ಫಾರಂಗಳಿಗಾಗಿ ಮನವಿಯನ್ನು ಸಲ್ಲಿಸುವಾಗ ಅರ್ಹ ದರ್ಜೆಯಲ್ಲಿ ನೋಂದಾಯಿತರಾಗಿರುವ ಬಗ್ಗೆ ಪ್ರಮಾಣ ಪತ್ರ ಮತ್ತು ಗುತ್ತಿಗೆದಾರರ ದಾಖಲಾತಿ ಪುಸ್ತಕ (ಪಾಸ್ ಬುಕ್) ಗಳನ್ನು ಸಲ್ಲಿಸಿ ದಾಖಲಾತಿ ಮಾಡಿಕೊಳ್ಳಬೇಕು.
4. ಅರ್ಜಿ ಸಲ್ಲಿಸುವಾಗ ಅವರು ನಿರ್ವಹಿಸುತ್ತಿರುವ ಕಾಮಗಾರಿಗಳ ಪಟ್ಟಿಗಳನ್ನು ಮತ್ತು ಪೂರ್ಣಗೊಳಿಸಿದ ಕಾಮಗಾರಿಗಳ ಬಗ್ಗೆ ಪ್ರಮಾಣ ಪತ್ರವನ್ನು ಲಗತ್ತಿಸಬೇಕು. ಇಲ್ಲವಾದಲ್ಲಿ ಅರ್ಜಿಯನ್ನು ನೇರವಾಗಿ ತಿರಸ್ಕರಿಸಲಾಗುವುದು.
5. ಗುತ್ತಿಗೆದಾರರೇ ಸ್ವತಃ ಸಿಮೆಂಟ್, ಉಕ್ಕು ಮತ್ತು ಕಾಮಗಾರಿಗಳನ್ನು ಕೈಗೊಳ್ಳಲು ಇತರೆ ಅವಶ್ಯಕ ಸಾಮಗ್ರಿಗಳನ್ನು ಒದಗಿಸಿಕೊಂಡು ಇಲಾಖಾ ನಿಯಮಾವಳಿಗಳ ಪ್ರಕಾರ ಕೆಲಸವನ್ನು ಪೂರ್ಣಗೊಳಿಸಬೇಕು ಮತ್ತು ಗುತ್ತಿಗೆದಾರರು ಸಾಮಗ್ರಿಗಳನ್ನು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಬಗ್ಗೆ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು.
6. ಟೆಂಡರ್ ಫಾರಂಗಳನ್ನು ಪಡೆಯುವ ಸಂದರ್ಭದಲ್ಲಿ ಮತ್ತು ಟೆಂಡರ್ ಸಲ್ಲಿಸುವ ಸಮಯದಲ್ಲಿ ಪಾಸ್ ಬುಕ್‌ನಲ್ಲಿ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು.
7. ಮೇಲಿನ ಕಾಮಗಾರಿಗೆ ಅರ್ಜಿ ಸಲ್ಲಿಸುವ ಗುತ್ತಿಗೆದಾರರು, ಅದೇ ರೀತಿಯ ಕಾಮಗಾರಿಯನ್ನು (ಎ) ಕಾಮಗಾರಿಗೆ ನಿಗದಿಪಡಿಸಿದ ಮೊತ್ತದಲ್ಲಿ ಶೇಕಡ 30 ರಷ್ಟು ಮೊತ್ತಕ್ಕೆ ಹಿಂದಿನ ಐದು ಆರ್ಥಿಕ ವರ್ಷಗಳಲ್ಲಿನ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ಕೆಲಸ ಕೈಗೊಂಡು ತೃಪ್ತಿಕರವಾಗಿ ಪೂರೈಸಿರಬೇಕು ಅಥವಾ (ಬಿ) ಹಿಂದಿನ ಐದು ಆರ್ಥಿಕ ವರ್ಷಗಳ ಕಾಲಾವಧಿಯಲ್ಲಿ ವರ್ಷಕ್ಕೆ ಕನಿಷ್ಟ ಶೇಕಡ 10 ರಂತೆ ಒಟ್ಟು ಗೂಡಿಸಿದಂತೆ ಸದರಿ ಕಾಮಗಾರಿಗೆ ನಿಗದಿಪಡಿಸಿರುವ ಮೊತ್ತದ ಶೇಕಡ 30 ರಷ್ಟು ಮೊತ್ತದ ಕೆಲಸವನ್ನು ಕೈಗೊಂಡು ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಿಗಳ ದೃಢೀಕರಣ ಪತ್ರವನ್ನು ಅರ್ಜಿಸಲ್ಲಿಸುವ ಸಂದರ್ಭದಲ್ಲೇ ಒದಗಿಸಬೇಕು.
8. ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸಗಳನ್ನು ಪೂರ್ಣಗೊಳಿಸದೇ ಮಧ್ಯದಲ್ಲಿ ತೊರೆದಿರಬಾರದು, ಹಾಗೂ ಸಕಾರಣವಿಲ್ಲದೆ ಯಾವುದೇ ಕಾಮಗಾರಿಯನ್ನು ವಿಳಂಬವಾಗಿ ಪೂರೈಸಿರಬಾರದು. ಇಂತಹ ಗುತ್ತಿಗೆದಾರರ ಅರ್ಜಿಗಳನ್ನು ನೇರವಾಗಿ ತಿರಸ್ಕರಿಸಲಾಗುವುದು. ಒಂದು ವೇಳೆ ಗುತ್ತಿಗೆ ಅವಧಿ ಪೂರ್ಣಗೊಂಡಿದ್ದರೂ ಕಾಮಗಾರಿ ಪೂರ್ಣಗೊಳಿಸದಿದ್ದಲ್ಲಿ, ಕುಂಠಿತವಾಗಿದ್ದಲ್ಲಿ ಅಂತಹ ಗುತ್ತಿಗೆದಾರರ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

9. ಮೇಲಿನ ಕೆಲಸಗಳಿಗೆಬೇಕಾದ ಅಗತ್ಯವಾಗಿ ಬೇಕಾಗಿರುವ ಯಂತ್ರೋಪಕರಣಗಳ ಪೈಕಿ ಸ್ವಂತ ಹೊಂದಿರುವ ಅಥವಾ ಹೊಂದಿಸಿಕೊಂಡು ಕೆಲಸ ನಿರ್ವಹಿಸುವಂತಹ ಯಂತ್ರೋಪಕರಣಗಳು ಸೆಂಟ್ರಿಂಗ್ ಸಾಮಗ್ರಿಗಳು, ವೈಬ್ರೇಟರ್‌ಗಳು, ಕಾಂಕ್ರೀಟ್ ಮಿಕ್ಸರ್ ಹಾಗೂ ಏರ್ ಕಂಪ್ರೆಸರ್ ಇತರೆ ಅವಶ್ಯಕ ಯಂತ್ರೋಪಕರಣಗಳು ಈ ಯಂತ್ರೋಪಕರಣಗಳು ಚಾಲ್ತಿಯಲ್ಲಿರುವ ಬಗ್ಗೆ ದಾಖಲಾತಿಗಳನ್ನು ಸಕ್ಷಮ ಪ್ರಾಧಿಕಾರದಿಂದ (ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ) ದೃಢೀಕರಿಸಿ ಅರ್ಜಿ ಸಲ್ಲಿಸುವ ಸಮಯದಲ್ಲೇ ಒದಗಿಸತಕ್ಕದ್ದು. ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
10. ಟೆಂಡರ್ ಸಲ್ಲಿಸುವ ಗುತ್ತಿಗೆದಾರರು ತಾಂತ್ರಿಕ ಬಿಡ್‌ನಲ್ಲಿನ ಎಲ್ಲಾ ವಿವರಗಳನ್ನು ಭರ್ತಿಮಾಡಿ ಇಎಂಡಿ, ಯಂತ್ರೋಪಕರಣ ಮತ್ತು ಅಗತ್ಯ ದಾಖಲಾತಿಗಳೊಂದಿಗೆ ತಾಂತ್ರಿಕ ಬಿಡ್ ಎಂದು ನಮೂದಿಸಿ ಪ್ರತ್ಯೇಕ ಲಕೋಟೆಯಲ್ಲಿ ಮೊಹರು ಮಾಡಿ, ಆರ್ಥಿಕ ಬಿಡ್‌ನಲ್ಲಿನ ಷೆಡ್ಯೂಲ್ ಬಿ ನಲ್ಲಿ ದರಗಳನ್ನು ಅಳವಡಿಸಿ ಆರ್ಥಿಕ ಬಿಡ್ ಎಂದು ನಮೂದಿಸಿ ಪ್ರತ್ಯೇಕ ಲಕೋಟೆಯಲ್ಲಿ ಮೊಹರು ಮಾಡಿ, ಎರಡೂ ಲಕೋಟೆಗಳ ಮೇಲೆ ಕಾಮಗಾರಿಯ ಹೆಸರನ್ನು ಸ್ಪಷ್ಟವಾಗಿ ನಮೂದಿಸಿ ಈ ಎರಡೂ ಲಕೋಟೆಗಳನ್ನು ಮೂಲ ಲಕೋಟೆಯಲ್ಲಿ ಹಾಕಿ ಮೊಹರು ಮಾಡಿ ಕಾಮಗಾರಿಯ ಹೆಸರನ್ನು ನಮೂದಿಸಿ ಸಲ್ಲಿಸತಕ್ಕದ್ದು.
11. ಗುತ್ತಿಗೆದಾರರು ಕೆಲಸ ಮುಗಿದ ನಂತರ ಎರಡು ವರ್ಷದವರೆವಿಗೆ ಸ್ವಂತ ಖರ್ಚಿನಲ್ಲೆ ಕಾಮಗಾರಿಯ ನಿರ್ವಹಣೆಯನ್ನು ಮಾಡತಕ್ಕದ್ದು.
12. ಗುತ್ತಿಗೆದಾರರು ಟೆಂಡರ್ ಸಲ್ಲಿಸುವಾಗ ಲಕೋಟೆ ಮೇಲೆ ಮತ್ತು 'ಬಿ' ಷೆಡ್ಯೂಲ್‌ನಲ್ಲಿ ತಮ್ಮ ಪೂರ್ಣ ವಿಳಾಸವನ್ನು ನಮೂದಿಸಬೇಕು. ಇಲ್ಲವಾದಲ್ಲಿ ನೇರವಾಗಿ ತಿರಸ್ಕರಿಸಲಾಗುವುದು.
13. ಗುತ್ತಿಗೆದಾರರು ಟೆಂಡರ್ ಸಲ್ಲಿಸುವಾಗ 'ಬಿ' ಷೆಡ್ಯೂಲ್‌ನಲ್ಲಿ ದರಗಳನ್ನು ನಮೂದಿಸುವಾಗ ಸ್ಪಷ್ಟವಾಗಿ ಒಂದೇ ರೀತಿಯ ಬರವಣಿಗೆಯಲ್ಲಿ ಪ್ರತಿ ಪುಟಕ್ಕೂ ಸಹಿಯೊಂದಿಗೆ ಯಾವುದೇ ರೀತಿಯ ವ್ಯತ್ಯಾಸವಾಗದಂತೆ ನಮೂದಿಸಬೇಕು, ಇಲ್ಲವಾದಲ್ಲಿ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.
14. ಟೆಂಡರ್‌ದಾರರು ಜಂಟಿಯಾಗಿ (ಇನ್ನೋರ್ವ ಗುತ್ತಿಗೆದಾರರೊಂದಿಗೆ) ಭಾಗವಹಿಸಲು ಅವಕಾಶವಿಲ್ಲ.

ಕಾರ್ಯನಿರ್ವಾಹಕ ಇಂಜಿನಿಯರ್,
ಲೋಕೋಪಯೋಗಿ ಇಲಾಖೆ ವಿಭಾಗ, ತುಮಕೂರು.

ಪಿ.ಆರ್. 225

## ಕಂದಾಯ ಇಲಾಖೆ

**ಅಧಿಸೂಚನೆ ಸಂಖ್ಯೆ:ಕಂಇ 8 ಎಟಿಎಸ್ 2006, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2006**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ)ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಈ ಕೆಳಕಂಡ ಅಭ್ಯರ್ಥಿಗಳನ್ನು ತಹಶೀಲ್ದಾರ್ ಗುಂಪು "ಬಿ" ಹುದ್ದೆಗೆ ಆಯ್ಕೆ ಮಾಡಿ ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ Conf.25/2005-06/PSC ದಿನಾಂಕ:28-02-2006ರ ರಾಜ್ಯಪತ್ರದಲ್ಲಿ ಪ್ರಕಟಿಸಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ |
|---|---|
| 1 | ಉದಯ್ ಕುಮಾರ್ ಶೆಟ್ಟಿ ಬಿ<br>ಕೇರ್ ಆಫ್ ರಾಚಯ್ಯ ,1ನೇ ಕ್ರಾಸ್ ಪಾಲಸಂದ್ರ ಲೇಔಟ್, ಕೋಲಾರ- 563101 |
| 2 | ಶಿವಪ್ರಸಾದ್ ಪಿ.ಆರ್<br>ಬಿನ್. ಲೇ.ರಾಮಣ್ಣ ಎಂ.ವಿ,ನಂ.825, 24ನೇ ಮುಖ್ಯ ರಸ್ತೆ,<br>2ನೇ ಫೇಸ್,ಜೆ.ಪಿ.ನಗರ ಬೆಂಗಳೂರು -560078 |
| 3 | ಮಂಜುನಾಥ ಪಿ.ಎಸ್<br>ಬಿನ್.ಶರಣಪ್ಪ, ತುರುವನೂರು,ಚಿತ್ರದುರ್ಗ ಜಿಲ್ಲೆ 577517 |
| 4 | ಮಧುಕೇಶ್ವರ ಎಸ್ ಎಸ್<br>ದವಳಗಿರಿ- 7ನೇ ಕ್ರಾಸ್ ಚಾಮುಂಡೇಶ್ವರಿ ನಗರ ,ಮಂಡ್ಯ -571401 |
| 5 | ವರಪ್ರಸಾದ ರೆಡ್ಡಿ ಬಿ.ಎನ್<br>ಬಿನ್. ನರಸಿಂಹರೆಡ್ಡಿ ಬಿ,ಹುಣಸೇನಹಳ್ಳಿ ಮೇಲ್ಯ ಪೋಸ್ಟ್<br>ಗೌರಿಬಿದನೂರು ತಾ: ,ಕೋಲಾರ ಜಿ: 561208 |
| 6 | ಸತೀಶ್ ಬಾಬು ಹೆಚ್.ಎಸ್<br>ಬಿನ್. ಸಿದ್ದಯ್ಯ ಹೆಚ್.ಬಿ, ಹೊನ್ನಾವಲಗೆರೆ ಕೆ ಮದ್ದೂರು, ಮಂಡ್ಯ ಜಿ: 571433 |
| 7 | ಮಹೇಶ್ ಬಾಬು ಎಂ<br>ಬಿನ್.ಬಿ.ಪಿ.ನಂಜುಂಡಸ್ವಾಮಿ,ತ್ಯಾಗರಾಜನಗರ ಕಾಲೋನಿ, ಪಾಂಡವಪುರ ಮಂಡ್ಯ ಜಿ: 571434 |
| 8 | ಪ್ರವೀಣ್ ಬಿ. ಬಾಗೇವಾಡಿ<br>ಬಿನ್.ಪಂಡಿತ್ ,ಡಾ: ಅಂಬೇಡ್ಕರ್ ನಗರ ಚಿಕ್ಕೋಡಿ ಅಂಚೆ, ಬೆಳಗಾಂ ಜಿ: 591201 |
| 9 | ಕಾತ್ಯಾಯಿನಿ ದೇವಿ ಎಸ್<br>ಬಿನ್.ಶಿವಶಂಕರಪ್ಪ ಎಸ್.ಹೆಚ್,ನಂ. 605, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು 560010 |
| 10 | ಮಹದೇವ ಎ.ಮುರಗಿ<br>ಬಿನ್. ಅಡಿವೆಪ್ಪ ಮುರಗಿ,ಇಂಗ್ಲಿಷ್ ಉಪನ್ಯಾಸಕರು,<br>ಸರ್ಕಾರಿ ಪದವಿಪೂರ್ವ ಕಾಲೇಜು,ನಾಗಮಂಗಲ, ಮಂಡ್ಯ ಜಿಲ್ಲೆ-571432. |
| 11 | ನಾಗಹನುಮಯ್ಯ ಜಿ.ಹೆಚ್<br>ಬಿನ್.ಹನುಮಯ್ಯ ಗೋಣಿಹಳ್ಳಿ,ಯಲಚಿಗೆರೆ ಪೋಸ್ಟ್ ಕೊರಟಗೆರೆ ತಾಲ್ಲೂಕು<br>ಉರ್ಡಿಗೆರೆ ಮಾರ್ಗ, ತುಮಕೂರು 572140 |

| ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ |
|---|---|
| 12 | ದಾಸೇಗೌಡ ಎಂ<br>ನಂ.442/1 1ನೇ ಫ್ಲೋರ್ ಎಸ್‌ಸಿ/ಎಸ್‌ಟಿ ಬಾಯ್ಸ್ ಹಾಸ್ಟೆಲ್‌ಎದುರು,<br>ಲ್ಯಾಂಡ್ ಆರ್ಮಿ ಕಛೇರಿ ರೋಡ್, ವಿವಿ ನಗರ, ಕಲ್ಲಳ್ಳಿ , ಮಂಡ್ಯ 571401 |
| 13 | ದೇವರಾಜು ಎ<br>ಬಿನ್.ಆಂಜನಪ್ಪ ಕೆ.ಹೆಚ್,ನಂ.1910 ಕೆ.ಬ್ಲಾಕ್ 1ನೇ ಸ್ಟೇಜ್<br>3ನೇ ಕ್ರಾಸ್,ಕುವೆಂಪುನಗರ ಮೈಸೂರು 570023 |
| 14 | ರವಿ ಎಂ. ತಿರ್ಲಾಪುರ್<br>ಬಿನ್.ಮಲ್ಲಪ್ಪ ಬಿ.ತಿರ್ಲಾಪುರ್,ಕುಂಬಾರ ಗಲ್ಲಿ, ಶಿಗ್ಗಾಂವ್,ಹಾವೇರಿ ಜಿಲ್ಲೆ 581205 |
| 15 | ಮಂಜುನಾಥಸ್ವಾಮಿ ಬಿ.ಎಸ್<br>ಮಂಗಳ ಹುಲುವೇನಹಳ್ಳಿ,ಸಿಸಿ ಕುಪ್ಪೆ ಪೋಸ್ಟ್, ಬೆಂಗಳೂರು ದಕ್ಷಿಣ **562130** |
| 16 | ಜವರೇಗೌಡ ಟಿ<br>ಬಿನ್.ತಿಮ್ಮೇಗೌಡ(ಲೇ),ಪೂರ್ಣಿಮ ಸದನ ಶಂಕರನಗರ, 3ನೇ ಕ್ರಾಸ್, ಮಂಡ್ಯ 571401 |
| 17 | ಶಶಿಧರ್ ಬಗಲಿ<br>ಶಾಕಾಂಬರಿ ನಿಲಯ, ಪುಟ್ಟಣ್ಣಶೆಟ್ಟಿ ನವಜೀವನ ಹೌಸಿಂಗ್ ಕಾಲೋನಿ ಹತ್ತಿರ,<br>ಆಸ್ಪತ್ರೆ ಕಟ್ಟಡದ ಎದುರು, ಬಿಜಾಪುರ-586103. |
| 18 | ರೇಷ್ಮ ತಹಸೀನ್<br>ಬಿನ್.ಮಹಮದ್ ನಿಸಾರ್ ಅಹಮದ್,ನಂ.256/6 , 2ನೇ ಕ್ರಾಸ್<br>ಚರ್ಚ್ ರೋಡ್,ನಾರಪ್ಪ ಗಾರ್ಡನ್, ಜೆಸಿ ನಗರ,ಬೆಂಗಳೂರು -560006 |
| 19 | ಇಸ್ಮಾಯಿಲ್ ಸಾಹೇಬ್ ಶಿರಹಟ್ಟಿ<br>ಬಿನ್.ರಾಜೇಸಾಹೇಬ್,ಪೋಲೀಸ್ ಸ್ಟೇಷನ್ ಹತ್ತಿರ<br>ಶಿಗ್ಗಾಂವ್,(SHIGGAON) ಹಾವೇರಿ ಜಿಲ್ಲೆ 581205 |
| 20 | ಜಯಮಾಧವ ಪಿ<br>ಬಿನ್.ಪ್ರಭಾಶಂಕರ್,ನಂ.4035 ಶಂಕರ್ ನಗರ,1ನೇ ಕ್ರಾಸ್ , ಚಂದಗಲ್ ಲೇಔಟ್,<br>ಮಂಡ್ಯ 571401 |
| 21 | ವಾಣಿ ಬಿ<br>ನಂ.399/ಹೆಚ್ 9ನೇ ಎಫ್ ಮೈನ್ ,6ನೇ ಕ್ರಾಸ್, ವಿಜಯನಗರ್, ಬೆಂಗಳೂರು -560040 |
| 22 | ಖಾಜಿ ನಫೀಸ<br>ಕೇರ್ ಆಫ್: ಯು.ಅಬ್ದುಲ್ ಮುತಾಲಿಬ್,<br>ಲೆಕ್ಚರರ್, ಪಿ.ಡಬ್ಲ್ಯೂ.ಡಿ.ಕ್ವಾರ್ಟರ್ಸ್, ನಂ.49/7,ಬೆಳಗಾಲ ಕ್ರಾಸ್, ಕಂಟೋನ್‌ಮೆಂಟ್,<br>ಬಳ್ಳಾರಿ-583104. |
| 23 | ಧನಲಕ್ಷ್ಮಿ<br>ಬಿನ್.ನಾಗರಾಜಯ್ಯ ಎನ್,ಅವಲಳ್ಳಿ ಸಿಂಗನಾಯಕನಹಳ್ಳಿ ಪೋಸ್ಟ್<br>ಯಲಹಂಕ ಬೆಂಗಳೂರು -560064 |
| 24 | ಕವಿತ ರಾಜಾರಾಮ್<br>ಬಿನ್.ಎನ್.ರಾಜಾರಾಮ್,ನಂ.599 ಇರ್ವಿನ್ ರೋಡ್,ಮೈಸೂರು 570001 |
| 25 | ಹರಿಶಿಲ್ಪ ಜಿ.ಆರ್<br>ಬಿನ್.ವಿ.ರಾಮಯ್ಯ,ಗುಂಜೂರ್ ಪೋಸ್ಟ್,ಬೆಂಗಳೂರು -560087 |
| 26 | ರಶ್ಮಿ ಜಿ<br>ನಂ.97 5ನೇ ಕ್ರಾಸ್,ಟೀಚರ್ಸ್ ಕಾಲೋನಿ 1ನೇ ಸ್ಟೇಜ್, ಜೆಪಿ ನಗರ ಪೋಸ್ಟ್ ಬೆಂಗಳೂರು -560078 |
| 27 | ರೇಖಾ ಟಿ<br>ಬಿನ್.ತಿಮ್ಮೇಗೌಡ ಸಿ,11ಎ ಮೈನ್ ಎ ಸೆಕ್ಟರ್,ನ್ಯೂ ಟೌನ್ ಯಲಹಂಕ, ಬೆಂಗಳೂರು -560064 |
| 28 | ಸುರೇಶ್ ಕುಮಾರ್ ಕೆ.ಎಂ<br>ನಂ.1622 1ನೇ ಫ್ಲೋರ್, 1ನೇ ಬಿ ಕ್ರಾಸ್,Opp: ವಾಟರ್ ಟ್ಯಾಂಕ್, ಚಂದ್ರ ಲೇಔಟ್,<br>ಬೆಂಗಳೂರು -560040 |
| 29 | ವೆಂಕಟೇಶಮೂರ್ತಿ ವಿ<br>ಬಿನ್.ಎಸ್.ವಿ.ವೆಂಕಟಸ್ವಾಮಿ,ನಂ.6/6 ಆರ್.ವಿ.ಶೆಟ್ಟಿ ಲೇಔಟ್<br>ಶೇಷಾದ್ರಿಪುರಂ ಬೆಂಗಳೂರು -560020 |
| 30 | ರಂಗನಾಥ್<br>ಬಿನ್.ಕೆಂಚಪ್ಪ,ನಂ.1524 ಕುಚ್ಚಪ್ಪಪೇಟ್ ದೊಡ್ಡಬಳ್ಳಾಪುರ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ 561203 |

| ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ |
|---|---|
| 31 | ದಯಾನಂದ್ ಬಂಡಾರಿ<br>ಮಾತೃ ಛಾಯ,ಅಸಿಸ್ಟೆಂಟ್ ಟೀಚರ್ ಸರ್ಕಾರಿ ಪಿಯು ಕಾಲೇಜ್<br>ಮಣ್ಣಿನಲ್ಲೂರು ಬಂಟ್ವಾಳ ತಾಲ್ಲೋಕು,ದಕ್ಷಿಣ ಕನ್ನಡ 574298 |
| 32 | ರಾಚಪ್ಪ ಎಂ<br>ಬಿನ್.ಅಯ್ಯಪ್ಪ,ಕೆಎಸ್‌ವಿ ನಿಲಯ,ನಂ.13 ಕಲಾಸಿಪಾಳ್ಯ ಹೊಸ ಬಡಾವಣೆ<br>ಬೆಂಗಳೂರು -560002 |
| 33 | ರಾಜು ಮೊಗವೀರ ಕೆ<br>ಬಿನ್.ಕೃಷ್ಣ ಮೊಗವೀರ,ಎಂಪ್ಲಾಯ್‌ಮೆಂಟ್ ಆಫೀಸರ್, ಹೆಬ್ಬಾರ್ ಬಿಲ್ಡಿಂಗ್, ಕದಿಯಾಲಿ , ಉಡುಪಿ |
| 34 | ಸುರೇಶ್ ಜಿ<br>ಬಿನ್.ಹೆಚ್. ಗಂಗಣ್ಣ, ನಂ.735 ಶ್ರಿ ಭಗವತಿ ಭಗವಾನ್ ಆಶ್ರಯ<br>ಫ್ರಿಡಂ ಫೈಟರ್ಸ್ ಲೇಔಟ್, ಲಗ್ಗೆರೆ, ಬೆಂಗಳೂರು -560058 |
| 35 | ವಿಜಯ್ ಕುಮಾರ್ ಹೊನಕೇರಿ<br>ಬಿನ್.ಮಾರುತಿ ಕೇರ್‌ಆಫ್ ಹೊನಕೇರಿ ಎಂ.ಡಿ,ನವೀನ್ ಷೂ ಮಾರ್ಟ್<br>ಗಾಂಧೀಬಜಾರ್, ನರಗುಂದ ಗದಗ 582207 |
| 36 | ಮಂಜುನಾಥ ಜಿ.ಎಸ್<br>ಬಿನ್.ನಂಜೇಗೌಡ ಜಿ.ಪಿ,ಗುಂಜೆ ಅಟ್ ಸಿಂಗಾಪುರ ಅಂಚೆ, ಹೆಚ್.ಎಸ್.ಪುರ ತಾಲ್ಲೋಕು<br>ಹಾಸನ ಜಿಲ್ಲೆ 573211 |
| 37 | ನಾಗರಾಜ ಎಲ್.ಸಿ<br>ಬಿನ್.ಲಿಂಗಪ್ಪ, ಬಿ.ಹೆಚ್.ರಸ್ತೆ ಪರಮಣ್ಣ ಲೇಔಟ್, ನೆಲಮಂಗಲ ತಾಲ್ಲೋಕು ಬೆಂಗಳೂರು 582123 |
| 38 | ರೂಪ ಬಿ.ಆರ್<br>ಬಿನ್.ರಂಗಪ್ಪ ಬಿ.ಸಿ,ನಂ.368, 16ನೇ ಮೈನ್ ಬಿ ಬ್ಲಾಕ್<br>ವಿಜಯನಗರ 3ನೇ ಹಂತ, ಮೈಸೂರು 570017 |
| 39 | ನರಸಿಂಹಪ್ಪ<br>ಬಿನ್.ಕೃಷ್ಣಪ್ಪ ಎ.ಡಿ, ಕಾಟೇನಳ್ಳಿ ಸೋಮನಹಳ್ಳಿ,<br>ಪೆರೇಸಂದ್ರ ರೋಡ್ ಗುಡಿಬಂಡೆ ತಾಲ್ಲೋಕು 562104 |
| 40 | ಭಾರತಿ ಡಿ<br>ಗಂಡ ಹೆಚ್.ಪಿ.ಮಹದೇವಪ್ಪ,ನಂ.28ಎಂಐಜಿ 1 ,ವಿಜಯನಗರ ಬ್ಲಾಕ್<br>ಕೆ.ಆರ್.ನಗರ ಟೌನ್ ಮೈಸೂರು ಜಿಲ್ಲೆ 571602 |
| 41 | ರೂಪಕಲಾ ಟಿ.ಕೆ<br>ಬಿನ್.ಕರಿಯಪ್ಪ ಟಿ, ಕೆಹೆಚ್‌ಬಿ ಕಾಲೋನಿ, ಗಾಂಧಿನಗರ, ಸಾಗರ,ಶಿವಮೊಗ್ಗ ಜಿಲ್ಲೆ 572401 |
| 42 | ರೂಪ ಅರ್<br>ಬಿನ್.ಎಂ.ಎಸ್.ರಘುನಾಥಸಿಂಗ್, ನಂ.684, 5ಕ್ರಾಸ್ ಪಾಪರಾಮ್ ರಸ್ತೆ<br>ನಜರಾ ಬಾದ್, ಮೈಸೂರು 570001 |
| 43 | ಶಾರದ ಸಿ ಕೋಲ್ಕರ್<br>ಕೇರ್ ಆಫ್ ಪ್ರಭಾಕರ ದೊಡ್ಡಮನಿ,ರಾಜನಗರ ಶಿವಳ್ಳಿ ಪ್ಲಾಟ್, ಮೃತ್ಯಂಜಯ ನಗರ<br>ಧಾರವಾಡ 580006 |
| 44 | ರೇಣುಕಾಂಬ<br>ರೂಪನಗರ ನಂ.1742, 22ನೇ ಕ್ರಾಸ್, ಮತ್ತಿಕ್ಯಾತನಹಳ್ಳಿ ಪೋಸ್ಟ್ ಮೈಸೂರು ತಾಲ್ಲೋಕು,<br>ಮೈಸೂರು ಜಿಲ್ಲೆ |
| 45 | ಶಾಂತಲ ಕೆ.ಟಿ<br>ಬಿನ್.ತಿಪ್ಪಯ್ಯ ಬಿ.ಪಿ,ನಂ.34, 1ನೇ ಮುಖ್ಯ ರಸ್ತೆ 3ನೇ ಸ್ಟೇಜ್ , 4ನೇ ಬ್ಲಾಕ್, ಬಸವೇಶ್ವರ ನಗರ,<br>ಬೆಂಗಳೂರು 560079 |
| 46 | ಕವಿತಾ ರಾಣಿ ಆರ್<br>ಬಿನ್.ರಾಮಯ್ಯ, ಡಿ.ನಂ.32 ಧರ್ಮಣ್ಣ ಗಾರ್ಡನ್ ಆರ್.ಟಿ.ನಗರ, ದಿನ್ನೂರು<br>ಬೆಂಗಳೂರು 560032 |
| 47 | ಗಣಪತಿ ಕಟ್ಟಿನಕೆರೆ<br>ಕೇರ್‌ಆಫ್ ಅಕ್ಷಯ ರಿಫ್ರೀಜಿರೇಷನ್,ಸೊರಬ ರೋಡ್ ಸಾಗರ ತಾಲ್ಲೋಕು,<br>ಶಿವಮೊಗ್ಗ ಜಿಲ್ಲೆ 577401 |

| ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ |
|---|---|
| 48 | ಆಶಾ ಪರ್ವಿನ್ ಎಸ್.ಎಂ<br>ಬಿನ್.ಮಹಮದ್ ಪಾಷಾ, ನಂ.62, 2ನೇ ಕ್ರಾಸ್ ಜೆ.ಎಸ್.ನಗರ,ಸರಸ್ವತಿ ಪುರಂ, ನಂದಿನಿ ಲೇಔಟ್<br>ಬೆಂಗಳೂರು 560096 |
| 49 | ಮಲ್ಲಿಕಾರ್ಜುನ ಎಂ. ಮೆಲ್ಲಿಹಳ್ಳಿ<br>ನಂ.177 ಸಿದ್ಧಲಿಂಗೇಶ್ವರ ನಗರ ನಿರ್ಮಿತಿ ಕೇಂದ್ರ ಹಿಂಭಾಗ ,ಬೊಗಾದಿ 2ನೇ ಹಂತ,<br>ಮೈಸೂರು 570026 |
| 50 | ಕುಸುಮಕುಮಾರಿ ಎಸ್<br>ಬಿನ್.ಆರ್.ಶ್ರೀನಿವಾಸ, ನಂ.705, 7ನೇ ಬಿ ಮುಖ್ಯ ರಸ್ತೆ, ಹೆಚ್ಅರ್‌ಬಿಆರ್ ಲೇಔಟ್<br>1ನೇ ಬ್ಲಾಕ್ ಕಲ್ಯಾಣನಗರ, ಬೆಂಗಳೂರು 560043 |

ಮೇಲ್ಕಂಡ ಅಭ್ಯರ್ಥಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರೂ.6000-11200ರ ವೇತನ ಶ್ರೇಣಿಯ ತಹಶೀಲ್ದಾರ್ ಗುಂಪು-ಬಿ ಹುದ್ದೆಗೆ ಪರಿವೀಕ್ಷಣೆಯ ಮೇಲೆ ( on probation) ಈ ಮೂಲಕ ನೇಮಕ ಮಾಡಲಾಗಿದೆ.

ಈ ಪರೀಕ್ಷಾರ್ಥಿಗಳ ಪರೀಕ್ಷಾರ್ಥಿ ಅವಧಿಯು ಎರಡು ವರ್ಷಗಳಾಗಿರುತ್ತವೆ. ಈ ಅವಧಿಯಲ್ಲಿ ಪರೀಕ್ಷಾರ್ಥಿಗಳು ತಹಶೀಲ್ದಾರ್ ಗುಂಪು-ಬಿ ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕು.

ಈ ಪರೀಕ್ಷಾರ್ಥಿ ಅಧಿಕಾರಿಗಳು 1999ನೇ ತಂಡದಲ್ಲಿ ಆಯ್ಕೆಯಾದ ಹಾಗೂ ಈಗಾಗಲೇ ನೇಮಕಾತಿ ಹೊಂದಿರುವ ತಹಶೀಲ್ದಾರ್ ಗುಂಪು-ಬಿ ಅಧಿಕಾರಿಗಳಿಗಿಂತ ಜೇಷ್ಟತೆಯಲ್ಲಿ ಹಿರಿಯರಾಗಿರುತ್ತಾರೆಂದು ತೀರ್ಮಾನಿಸಲಾಗಿದೆ.

ಈ ನೇಮಕಾತಿಯು ಭಾರತದ ಸರ್ವೋಚ್ಚ ನ್ಯಾಯಾಲಯದ ಮುಂದಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/1999, ಕರ್ನಾಟಕ ಉಚ್ಚ ನ್ಯಾಯಾಲಯದ ಮುಂದಿರುವ ರಿಟ್ ಅರ್ಜಿ ಸಂಖ್ಯೆ: 27140/2005 ಮತ್ತು ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಮುಂದಿರುವ ಅರ್ಜಿಗಳ ಸಂಖ್ಯೆ: 4184/2003, 1512/2003, 1741/2003 ಮತ್ತು 1172/2006 ಗಳಲ್ಲಿ ನ್ಯಾಯಾಲಯಗಳು ನೀಡುವ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ.

ಈ ನೇಮಕಾತಿ ಆದೇಶವನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ಅಭ್ಯರ್ಥಿಗಳು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ, ಕೊಠಡಿ ಸಂಖ್ಯೆ:506, 5ನೇ ಮಹಡಿ, ಬಹು ಮಹಡಿ ಕಟ್ಟಡ, ಬೆಂಗಳೂರು ಇವರಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದು.ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 227

**ವಿ.ಎಸ್. ವಸಂತಮಣಿ**

ಸರ್ಕಾರದ ಜಂಟಿ ಕಾರ್ಯದರ್ಶಿ, ಕಂದಾಯ ಇಲಾಖೆ

## ಕಂದಾಯ ಇಲಾಖೆ

**ಅಧಿಸೂಚನೆ ಸಂಖ್ಯೆ:ಕಂಇ 8 ಎಟಿಎಸ್ 2006(1), ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2006**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ)ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಈ ಕೆಳಕಂಡ ಅಭ್ಯರ್ಥಿಗಳನ್ನು ಭೂಮಾಪನ ಮತ್ತು ಭೂ ದಾಖಲೆಗಳ ಸಹಾಯಕ ನಿರ್ದೇಶಕರು, ಗುಂಪು "ಬಿ" ಹುದ್ದೆಗೆ ಆಯ್ಕೆ ಮಾಡಿ ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ Conf.25/2005-06/PSC ದಿನಾಂಕ:28-02-2006ರ ರಾಜ್ಯಪತ್ರದಲ್ಲಿ ಪ್ರಕಟಿಸಿದೆ.

| ಕ್ರ.ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ |
|---|---|
| 1. | ಉಮೇಶ ಬಿ ಜಿ<br>ಬಿನ್:ಗೋವಿಂದಪ್ಪ, ನಂ.469, 5ನೇ ಮುಖ್ಯ ರಸ್ತೆ, 2ನೇ ಹಂತ, 2ನೇ ಫೇಸ್,<br>ವೆಸ್ಟ್ ಆಫ್ ಕಾರ್ಡ್ ರಸ್ತೆ, ಮಹಾಲಕ್ಷ್ಮೀಪುರಂ,ಬೆಂಗಳೂರು-5600086 |
| 2. | ನಿರಂಜನ್ ಆರ್.<br>ಕೇರ್ ಆಫ್:ವೆಂಕಟಗೌಡ,<br>ಡಿ.ನಂ.1002/A, 3-A ಮೈನ್, 2ನೇ ಹಂತ,E-ಬ್ಲಾಕ್, ರಾಜಾಜಿನಗರ,ಬೆಂಗಳೂರು-560010 |
| 3. | ಕೃಷ್ಣ ಪ್ರಸಾದ್ ಎಂ.ಎಸ್.<br>ಕೇರ್ ಆಫ್: ಪ್ರಭಾಕರ್,ನಂ. MIG II, 13 ಹೌಸಿಂಗ್ ಬೋರ್ಡ್ ಕಾಲೋನಿ, ಬೈಪಾಸ್ ರೋಡ್,<br>ಅರಕಲಗೂಡು ತಾ: ಹಾಸನ ಜಿಲ್ಲೆ-573102. |
| 4. | ಕೇಶವಮೂರ್ತಿ ಎಂ.ಸಿ.<br>ಕೇರ್ ಆಫ್:ಲೇ. ಜಿ.ಚಿಕ್ಕರಂಗಯ್ಯ,<br>ನಂ.34, 5-A ಮುಖ್ಯ ರಸ್ತೆ, 4ನೇ ಕ್ರಾಸ್, A-ಬ್ಲಾಕ್, ಅಗ್ರಹಾರ ದಾಸರಹಳ್ಳಿ, ಬೆಂಗಳೂರು-560079. |
| 5. | ಸುಜಾತ ಹರ್ಲಾಪುರ್<br>ಬಿನ:ಫಕೀರಪ್ಪ ಶಿವಯೋಗೀಶ್ವರನಗರ, ಹಾವೇರಿ-581110. |
| 6. | ರವಿಕುಮಾರ್ ಎಂ<br>ಬಿನ್: ಮಂಜಪ್ಪ ಎಸ್., ಮಾರಿಕಾಂಬ ರಸ್ತೆ, ಸಾಗರ, ಶಿವಮೊಗ್ಗ ಜಿಲ್ಲೆ-577401. |

| ಕ್ರ.ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ |
|---|---|
| 7. | ರಾಮಾಂಜನೇಯ ಬಿ<br>ಬಿನ್: ಬೊಮ್ಮಯ್ಯ, ನಾಗಸಮುದ್ರ ಅಂಚೆ, ಮೊಳಕಾಲ್ಮೂರ್ ತಾ:, ಚಿತ್ರದುರ್ಗ ಜಿಲ್ಲೆ-577535 |
| 8. | ರಾಜಣ್ಣ ಬಿ<br>ಬಿನ್: ಬಗರಯ್ಯ, ಉಪಲೀಕಾನಹಳ್ಳಿ, ಸಾದರಹಳ್ಳಿ ಅಂಚೆ,<br>ಚಿಕ್ಕನಾಯಕನಹಳ್ಳಿ ತಾ: ತುಮಕೂರು ಜಿಲ್ಲೆ-572228. |

ಮೇಲ್ಕಂಡ ಅಭ್ಯರ್ಥಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರೂ.6000-11200ರ ವೇತನ ಶ್ರೇಣಿಯ ಭೂಮಾಪನ ಮತ್ತು ಭೂ ದಾಖಲೆಗಳ ಸಹಾಯಕ ನಿರ್ದೇಶಕರು ಗುಂಪು "ಬಿ" ಹುದ್ದೆಗೆ ಪರಿವೀಕ್ಷಣೆಯ ಮೇಲೆ ( on probation) ಈ ಮೂಲಕ ನೇಮಕ ಮಾಡಲಾಗಿದೆ.

ಈ ಪರೀಕ್ಷಾರ್ಥಿಗಳ ಪರೀಕ್ಷಾರ್ಥಿ ಅವಧಿಯು ಎರಡು ವರ್ಷಗಳಾಗಿರುತ್ತವೆ. ಈ ಅವಧಿಯಲ್ಲಿ ಪರೀಕ್ಷಾರ್ಥಿಗಳು ಭೂಮಾಪನ ಮತ್ತು ಭೂ ದಾಖಲೆಗಳ ಸಹಾಯಕ ನಿರ್ದೇಶಕರು, ಗುಂಪು "ಬಿ" ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕು.

ಈ ಪರೀಕ್ಷಾರ್ಥಿ ಅಧಿಕಾರಿಗಳು 1999ನೇ ತಂಡದಲ್ಲಿ ಆಯ್ಕೆಯಾದ ಹಾಗೂ ಈಗಾಗಲೇ ನೇಮಕಾತಿ ಹೊಂದಿರುವ ಭೂಮಾಪನ ಮತ್ತು ಭೂ ದಾಖಲೆಗಳ ಸಹಾಯಕ ನಿರ್ದೇಶಕರು, ಗುಂಪು "ಬಿ" ಅಧಿಕಾರಿಗಳಿಗಿಂತ ಜೇಷ್ಟತೆಯಲ್ಲಿ ಹಿರಿಯರಾಗಿ ರುತ್ತಾರೆಂದು ತೀರ್ಮಾನಿಸಲಾಗಿದೆ.

ಈ ನೇಮಕಾತಿಯು ಭಾರತದ ಸರ್ವೋಚ್ಚ ನ್ಯಾಯಾಲಯದ ಮುಂದಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/1999, ಕರ್ನಾಟಕ ಉಚ್ಚ ನ್ಯಾಯಾಲಯದ ಮುಂದಿರುವ ರಿಟ್ ಅರ್ಜಿ ಸಂಖ್ಯೆ: 27140/2005 ಮತ್ತು ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಮುಂದಿರುವ ಅರ್ಜಿಗಳ ಸಂಖ್ಯೆ: 4184/2003, 1512/2003, 1741/2003 ಮತ್ತು 1172/2006 ಗಳಲ್ಲಿ ನ್ಯಾಯಾಲಯಗಳು ನೀಡುವ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ.

ಈ ನೇಮಕಾತಿ ಆದೇಶವನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ಅಭ್ಯರ್ಥಿಗಳು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ, ಕೊಠಡಿ ಸಂಖ್ಯೆ:506, 5ನೇ ಮಹಡಿ, ಬಹು ಮಹಡಿ ಕಟ್ಟಡ, ಬೆಂಗಳೂರು ಇವರಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದು.ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 226

**ವಿ.ಎಸ್. ವಸಂತಮಣಿ**

ಸರ್ಕಾರದ ಜಂಟಿ ಕಾರ್ಯದರ್ಶಿ, ಕಂದಾಯ ಇಲಾಖೆ

## ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ

## ಜಂಟಿ ನಿರ್ದೇಶಕರ ಕಛೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ

### ಪ್ರಕಟಣೆ ಸಂಖ್ಯೆ: ಶಿ/ಎಂಸಿಎಸ್‌ಸಿ/ಅಧೀ/2005-06, ದಿನಾಂಕ: 17ನೇ ಏಪ್ರಿಲ್ 2006

ಈ ಕಛೇರಿ ವ್ಯಾಪ್ತಿಗೆ ಬರುವ ಮುಚ್ಚಿರುವ ಮಾದರಿ ಮರಗೆಲಸ ಮತ್ತು ಕುಲುಮೆ ಕೇಂದ್ರ ಶಿವಮೊಗ್ಗದ ರೂ.82,209/- (ಎಂಬತ್ತೆರಡು ಸಾವಿರದ ಎರಡುನೂರಾ ಒಂಭತ್ತು ರೂ.ಗಳು ಮಾತ್ರ) ಮೌಲ್ಯದ ಮಿಷನರಿಗಳು, ಉಪಕರಣಗಳು ಹಾಗೂ ಡೆಡ್‌ಸ್ಟಾಕ್ ಮತ್ತು ಕಚ್ಚಾಸಾಮಗ್ರಿಗಳನ್ನು ದಿನಾಂಕ: 05.06.2006ರ ಸೋಮವಾರದಂದು ಬೆಳಿಗ್ಗೆ 11.00 ಗಂಟೆಗೆ ಸರಿಯಾಗಿ ಜಂಟಿ ನಿರ್ದೇಶಕರ ಕಛೇರಿ, ಜಿಲ್ಲಾ ಕೇಂದ್ರ, ಶಿವಮೊಗ್ಗದಲ್ಲಿ ಬಹಿರಂಗವಾಗಿ ಹರಾಜು ಮಾಡಲಾಗುವುದು. ಹರಾಜಿನ ನಿಯಮಗಳನ್ನು ಕಛೇರಿ ಕೆಲಸದ ದಿನಗಳಲ್ಲಿ ಕೆಲಸದ ವೇಳೆಯಲ್ಲಿ ತಿಳಿದುಕೊಳ್ಳಬಹುದಾಗಿರುತ್ತದೆ.

ಪಿ.ಆರ್. 224

ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ.

## ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ,

## ಸರ್ಕಾರಿ ಮುದ್ರಣಾಲಯ, ನಂ.6/ಇ, 1ನೇ ಅಡ್ಡ ರಸ್ತೆ, ಕೆ.ಐ.ಎ.ಡಿ.ಬಿ. ಪೀಣ್ಯ 1ನೇ ಹಂತ, ತುಮಕೂರು ರಸ್ತೆ, ಬೆಂಗಳೂರು -58

### ಖಾಸಗಿ ಭದ್ರತಾ ಸ್ವಚ್ಛತಾ ಮತ್ತು ಹೌಸ್ ಕೀಪಿಂಗ್ ಹಾಗೂ ಕ್ಯಾಂಟೀನ್ ಸಿಬ್ಬಂದಿಗಳ ಸೇವೆಗಾಗಿ ಟೆಂಡರ್ ಅಧಿಸೂಚನೆ

### ಸಂಖ್ಯೆ: ಪಿ 304/2006-07, ದಿನಾಂಕ: 29ನೇ ಏಪ್ರಿಲ್ 2006

2006-07ನೇ ಸಾಲಿಗೆ ಸರ್ಕಾರಿ ಮುದ್ರಣಾಲಯ, ಬೆಂಗಳೂರು ಹಾಗೂ ಸರ್ಕಾರಿ ಜಿಲ್ಲಾ ಮುದ್ರಣಾಲಯಗಳಿಗೆ ಖಾಸಗಿ ಭದ್ರತಾ ಸಿಬ್ಬಂದಿ/ಸ್ವಚ್ಛತಾ ಸಿಬ್ಬಂದಿ ಮತ್ತು ಹೌಸ್ ಕೀಪಿಂಗ್ ಹಾಗೂ ಕ್ಯಾಂಟೀನ್ ಖಾಸಗಿ ಸಿಬ್ಬಂದಿಗಳ ಸೇವೆಯನ್ನು ಒದಗಿಸುವ ಬಗ್ಗೆ ಇಚ್ಛೆಯುಳ್ಳ ಮಾನವ ಶಕ್ತಿ ಒದಗಿಸುವ ನೋಂದಾಯಿತ ಸಂಸ್ಥೆಗಳು ಪ್ರತಿ ಸಿಬ್ಬಂದಿಯ ಸೇವಾ ಶುಲ್ಕವನ್ನು ಸೂಚಿಸಲು ಟೆಂಡರನ್ನು ಕರೆಯಲಾಗಿದೆ. ಮೊಹರಾದ ಲಕೋಟೆ-I ತಾಂತ್ರಿಕ ಬಿಡ್ ಮತ್ತು ಲಕೋಟೆ-II ಆರ್ಥಿಕ ಬಿಡ್ ಪದ್ಧತಿಯಲ್ಲಿ ಕರೆಯಲಾಗಿದೆ. ನಿಗದಿತ ಟೆಂಡರ್ ಫಾರಂಗಳನ್ನು ರೂ.400/- ಮತ್ತು ವ್ಯಾಟ್ ರೂ.50/- ಗಳನ್ನು ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಪೀಣ್ಯ, ಬೆಂಗಳೂರು-58 ಇವರ ಹೆಸರಿನಲ್ಲಿ ಪಾವತಿಸಿ ದಿನಾಂಕ: 29.05.2006ರ ಸಾಯಂಕಾಲ 4.00 ಗಂಟೆಯವರೆಗೆ ಈ ಕಛೇರಿಯಲ್ಲಿ ನಗದು ವಿಭಾಗಕ್ಕೆ ಡಿ.ಡಿ. ಹಾಗೂ ವ್ಯಾಟ್ ಡಿ.ಡಿ. ಗಳನ್ನು ಸಲ್ಲಿಸಿ ಟೆಂಡರ್ ಫಾರಂನ್ನು ಪಡೆದುಕೊಳ್ಳಬಹುದಾಗಿದೆ. ಟೆಂಡರ್‌ನ್ನು ಸಲ್ಲಿಸಲು ಕೊನೆಯ ದಿನಾಂಕ: 30.05.2006ರ ಸಂಜೆ 4.30 ಗಂಟೆಯವರೆಗೆ ನಿಗದಿಪಡಿಸಲಾಗಿದೆ.

## ಷರತ್ತುಗಳು ಮತ್ತು ನಿಬಂಧನೆಗಳು

## ಲಕೋಟೆ-I ರ ಷರತ್ತುಗಳು

1. ಟೆಂಡರ್‌ದಾರರು ಖಾಸಗಿ ಭದ್ರತಾ ಸಿಬ್ಬಂದಿ/ಸ್ವಚ್ಚತಾ ಸಿಬ್ಬಂದಿ ಮತ್ತು ಹೌಸ್ ಕೀಪಿಂಗ್ ಹಾಗೂ ಕ್ಯಾಂಟೀನ್ ಸಿಬ್ಬಂದಿಗಳ ಸೇವಾ ಸಂಸ್ಥೆಯು ಕಾರ್ಮಿಕ ಇಲಾಖೆಯಲ್ಲಿ ನೋಂದಾಯಿಸಿದ ದೃಢೀಕರಣ ಪ್ರತಿಯನ್ನು ಲಗತ್ತಿಸಿರಬೇಕು.
2. ಟೆಂಡರ್‌ದಾರರು ಈ ಹಿಂದಿನ ಮೂರು ವರ್ಷದ ಅವಧಿಯ ಆದಾಯ ತೆರಿಗೆಯನ್ನು ಪಾವತಿ ಮಾಡಿರುವ ಬಗ್ಗೆ ಮತ್ತು 2004-2005ನೇ ಸಾಲಿನ ಆದಾಯ ತೆರಿಗೆ ಅಸೆಸ್‌ಮೆಂಟ್‌ನೊಂದಿಗೆ ತೆರಿಗೆ ಅಧಿಕಾರಿಗಳಿಂದ ಪಡೆದ ಸ್ವೀಕೃತಿ ಪ್ರತಿಯನ್ನು ಲಗತ್ತಿಸಿರಬೇಕು.
3. ಟೆಂಡರ್‌ದಾರರು ಕಳೆದ ಮೂರು ವರ್ಷಗಳಲ್ಲಿ ತಮ್ಮ ಸಂಸ್ಥೆಯ ಲಾಭ ಮತ್ತು ನಷ್ಟಗಳ ಬಗ್ಗೆ ಚಾರ್ಟೆಡ್ ಅಕೌಂಟೆಂಟ್‌ರವರಿಂದ ದೃಢೀಕರಣ ಪತ್ರವನ್ನು ಲಗತ್ತಿಸಿರಬೇಕು.
4. ಟೆಂಡರ್‌ದಾರರು ಇ.ಎಂ.ಡಿ. ರೂ.20,000/- (ರೂಪಾಯಿ ಇಪ್ಪತ್ತು ಸಾವಿರ ಮಾತ್ರ) ಬ್ಯಾಂಕ್ ಡ್ರಾಫ್ಟ್ ರೂಪದಲ್ಲಿ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು ಇವರ ಹೆಸರಿಗೆ ಸಂದಾಯವಾಗುವಂತೆ ಪಡೆದು ಟೆಂಡರ್ ಜೊತೆಯಲ್ಲಿ ಅಂದರೆ ಕವರ್-1 ರಲ್ಲಿ ಲಗತ್ತಿಸಿರಬೇಕು. (ಇದಕ್ಕೆ ಬಡ್ಡಿ ನೀಡುವುದಿಲ್ಲ)

## ಲಕೋಟೆ-II ರ ಷರತ್ತುಗಳು

1. ಟೆಂಡರ್‌ದಾರರು ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು, ಸರ್ಕಾರಿ ಮುದ್ರಣಾಲಯ, ಪೀಣ್ಯ ಶೆಡ್, ಬೆಂಗಳೂರು, ಸರ್ಕಾರಿ ಹೊರವಲಯ ಮುದ್ರಣಾಲಯ, ಮೈಸೂರು ರಸ್ತೆ, ಬೆಂಗಳೂರು ಹಾಗೂ ಸರ್ಕಾರಿ ಜಿಲ್ಲಾ ಮುದ್ರಣಾಲಯಗಳಾದ ತುಮಕೂರು, ಧಾರವಾಡ, ಗುಲ್ಬರ್ಗ, ಮಂಗಳೂರು, ಕೋಲಾರ ಮತ್ತು ಶಿವಮೊಗ್ಗ ಇಲ್ಲಿಗೆ ಪ್ರತ್ಯೇಕವಾದ ಖಾಸಗೀ ಭದ್ರತಾ ಸಿಬ್ಬಂದಿ/ಸ್ವಚ್ಚತಾ ಸಿಬ್ಬಂದಿ ಮತ್ತು ಹೌಸ್ ಕೀಪಿಂಗ್ ಹಾಗೂ ಕ್ಯಾಂಟೀನ್ ಸಿಬ್ಬಂದಿಗಳ ಸೇವಾ ಶುಲ್ಕಗಳನ್ನು ನಿರ್ದಿಷ್ಟವಾಗಿ ಹಾಗೂ ಪ್ರತ್ಯೇಕವಾಗಿ ನಮೂದಿಸತಕ್ಕದ್ದು.
2. ಟೆಂಡರ್‌ನಲ್ಲಿ ಸೂಚಿಸಿರುವ ಖಾಸಗಿ ಭದ್ರತಾ ಸಿಬ್ಬಂದಿ/ಸ್ವಚ್ಚತಾ ಸಿಬ್ಬಂದಿ ಮತ್ತು ಹೌಸ್ ಕೀಪಿಂಗ್ ಹಾಗೂ ಕ್ಯಾಂಟೀನ್ ಸಿಬ್ಬಂದಿಗಳ ಸೇವೆಯನ್ನು ಪಡೆಯುವ ಬಗ್ಗೆ ನಿರ್ಧಾರ ತೆಗೆದುಕೊಂಡ ನಂತರ ಅನುತ್ತೀರ್ಣರಾದ ಸಂಸ್ಥೆಗಳಿಗೆ ಇ.ಎಂ.ಡಿ. ಗಳನ್ನು ಹಿಂದಿರುಗಿಸಲಾಗುವುದು.
3. ಸೂಚಿಸಿರುವ ಸೇವಾ ಶುಲ್ಕವು ಟೆಂಡರ್‌ನ್ನು ತೆರೆದ ದಿನಾಂಕದಿಂದ ಒಂದು ವರ್ಷದವರೆವಿಗೂ ಮಾನ್ಯತೆ ಸಿಂಧುತ್ವದಲ್ಲಿರಬೇಕು.
4. ಟೆಂಡರ್‌ನ್ನು ಯಾವುದೇ ಕಾರಣವನ್ನು ನೀಡದೆ ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಈ ಇಲಾಖೆಯ ನಿರ್ದೇಶಕರದ್ದಾಗಿರುತ್ತದೆ. ಈ ವಿಚಾರದಲ್ಲಿ ಉಂಟಾಗುವ ಯಾವುದೇ ವಿವಾದಗಳಲ್ಲಿ ಈ ಇಲಾಖೆಯ ನಿರ್ದೇಶಕರ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತವೆ.
5. ಪಾರದರ್ಶಕ ನಿಯಮಗಳ ಪ್ರಕಾರ ಮೊಹರಾದ ಲಕೋಟೆ-1ನ್ನು ದಿನಾಂಕ: 31.05.06 ರಂದು 12 ಗಂಟೆಗೆ ತೆರೆಯಲಾಗುವುದು. ಮತ್ತು ಲಕೋಟೆ-1ರ ಷರತ್ತುಗಳನ್ನು ಪೂರೈಸಿದ ಟೆಂಡರ್‌ದಾರರ ಲಕೋಟೆ-2ನ್ನು ದಿನಾಂಕ: 01.06.2006 ರಂದು 12 ಗಂಟೆಗೆ ತೆರೆಯಲಾಗುವುದು.
6. ಟೆಂಡರ್‌ನ್ನು ತೆರೆಯುವಾಗ ಹಾಜರಾಗುವ ಟೆಂಡರ್‌ದಾರರು ಅಥವಾ ಒಬ್ಬರು ಪ್ರತಿನಿಧಿಯು ಆಯಾ ಸಂಸ್ಥೆಯ ಗುರುತು ಪತ್ರದೊಂದಿಗೆ ಹಾಜರಾಗತಕ್ಕದ್ದು.
7. ಭದ್ರತಾ ಸಿಬ್ಬಂದಿಗಳ/ಸ್ವಚ್ಚತಾ ಸಿಬ್ಬಂದಿಗಳ / ಹೌಸ್ ಕೀಪಿಂಗ್ ಹಾಗೂ ಕ್ಯಾಂಟೀನ್ ಸಿಬ್ಬಂದಿ ವರ್ಗದ ವಯೋಮಿತಿ 50 ವರ್ಷದೊಳಗಿರಬೇಕು ಹಾಗೂ ದೈಹಿಕ ಅರ್ಹತೆ ಪಡೆದಿರಬೇಕು. ಪ್ರತಿದಿನ ಒಬ್ಬರು ಎಂಟು ಗಂಟೆಗಳ ಪ್ರಕಾರ ಸೇವೆಯನ್ನು ಸಲ್ಲಿಸಬೇಕು ಹಾಗೂ ಸೇವಾವಧಿ ವೇಳೆಯಲ್ಲಿ ಕಡ್ಡಾಯವಾಗಿ ಸಮವಸ್ತ್ರವನ್ನು ಧರಿಸಿರಬೇಕು.
8. ಜಯಶಾಲಿಗಳಾದ ಟೆಂಡರ್‌ದಾರರು ಒದಗಿಸುವ ಭದ್ರತಾ ಸಿಬ್ಬಂದಿಗಳು/ಸ್ವಚ್ಚತಾ ಸಿಬ್ಬಂದಿಗಳು/ಹೌಸ್ ಕೀಪಿಂಗ್/ಕ್ಯಾಂಟೀನ್ ಸಿಬ್ಬಂದಿಗಳು ಕೆಲಸದ ವೇಳೆಯಲ್ಲಿ ಬೇಜವಾಬ್ದಾರಿಯಾಗಿ ನಡೆದುಕೊಂಡರೆ ಸರ್ಕಾರಿ ಆಸ್ತಿಗೆ ಯಾವುದೇ ಹಾನಿ ಉಂಟಾಗುವ ರೀತಿ ನಡೆದುಕೊಂಡರೆ ಟೆಂಡರ್‌ದಾರರು ನೀಡಿರುವ ಇ.ಎಂ.ಡಿ. ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಸದರಿ ಸಂಸ್ಥೆಯ ಹೆಸರನ್ನು ಈ ಇಲಾಖೆಯ ಕಪ್ಪು ಪಟ್ಟಿಯಲ್ಲಿ ಸೇರಿಸಲಾಗುವುದು.
9. ಭದ್ರತಾ ಸಿಬ್ಬಂದಿಯವರಿಗೆ ಸಂಬಂಧಿಸಿದ ಭವಿಷ್ಯ ನಿಧಿ, ಕನಿಷ್ಠ ವೇತನ ಮತ್ತು ಇತರೆ ಸೇವಾ ಸೌಲಭ್ಯಗಳನ್ನು ಟೆಂಡರ್‌ದಾರರೇ ಕಡ್ಡಾಯವಾಗಿ ಭರಿಸಬೇಕು.
10. ಜಯಶಾಲಿಗಳಾದ ಟೆಂಡರ್‌ದಾರರು ರೂ.100/-ರ ಛಾಪಾ ಕಾಗದದಲ್ಲಿ ಒಪ್ಪಂದದ ಕರಾರು ಪತ್ರ ಮಾಡಿಕೊಳ್ಳತಕ್ಕದ್ದು.
11. ಭದ್ರತಾ ಸಿಬ್ಬಂದಿ/ಸ್ವಚ್ಚತಾ ಸಿಬ್ಬಂದಿ/ಹೌಸ್ ಕೀಪಿಂಗ್ ಹಾಗೂ ಕ್ಯಾಂಟೀನ್ ಸಿಬ್ಬಂದಿಯವರು ಸೇವೆ ಸಲ್ಲಿಸಬೇಕಾಗಿರುವ ವಿವರವು ಈ ಕೆಳಗಿನಂತಿದೆ.

| ಕ್ರಮ ಸಂಖ್ಯೆ | ಸರ್ಕಾರಿ ಮುದ್ರಣಾಲಯ ಮತ್ತು ಜಿಲ್ಲಾ ಮುದ್ರಣಾಲಯಗಳ ಹೆಸರು | ಭದ್ರತಾ ಸಿಬ್ಬಂದಿ ಪ್ರತಿಯೊಬ್ಬರು 8 ಗಂಟೆಗಳ ಕಾಲ | ಸ್ವಚ್ಚತಾ ಸಿಬ್ಬಂದಿ | ಹೌಸ್ ಕೀಪಿಂಗ್ / ಕ್ಯಾಂಟೀನ್ ಸಿಬ್ಬಂದಿ |
|---|---|---|---|---|
| 1 | 2 | 3 | 4 | 5 |
| 1 | ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು-58 | 9 | - | 2+5 |
| 2 | ಸರ್ಕಾರಿ ಮುದ್ರಣಾಲಯ, ಪೀಣ್ಯ ಶೆಡ್, ಬೆಂಗಳೂರು-58 | 3 | - | 1 |
| 3 | ಸರ್ಕಾರಿ ಹೊರವಲಯ ಮುದ್ರಣಾಲಯ, ಮೈಸೂರು ರಸ್ತೆ, ಬೆಂಗಳೂರು-59 | 3 | - | - |
| 4 | ಸರ್ಕಾರಿ ಜಿಲ್ಲಾ ಮುದ್ರಣಾಲಯ, ಮಂಗಳೂರು | 3 | - | - |
| 5 | ಸರ್ಕಾರಿ ಜಿಲ್ಲಾ ಮುದ್ರಣಾಲಯ, ತುಮಕೂರು | 6 | 8 | - |
| 6 | ಸರ್ಕಾರಿ ಜಿಲ್ಲಾ ಮುದ್ರಣಾಲಯ, ಧಾರವಾಡ | 3 | - | - |

| 1 | 2 | 3 | 4 | 5 |
|---|---|---|---|---|
| 7 | ಸರ್ಕಾರಿ ಜಿಲ್ಲಾ ಮುದ್ರಣಾಲಯ, ಗುಲ್ಬರ್ಗ | 3 | 2 | - |
| 8 | ಸರ್ಕಾರಿ ಜಿಲ್ಲಾ ಮುದ್ರಣಾಲಯ, ಕೋಲಾರ | 3 | - | - |
| 9 | ಸರ್ಕಾರಿ ಜಿಲ್ಲಾ ಮುದ್ರಣಾಲಯ, ಶಿವಮೊಗ್ಗ | 3 | - | - |

12. ಆದಾಯ ತೆರಿಗೆಯನ್ನು ಸೇವಾ ಶುಲ್ಕ ಪಾವತಿ ಮಾಡುವಾಗ ನಿಯಮಾನುಸಾರ ಕಟಾಯಿಸಲಾಗುವುದು.

13. ಹೆಚ್ಚಿನ ವಿವರಗಳಿಗೆ ಈ ಕಛೇರಿಯ ಕೆಲಸದ ದಿನದಂದು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿದೆ.

ಪಿ.ಆರ್. 235 ನಿರ್ದೇಶಕರು.

**ಉಪ ನಿರ್ದೇಶಕರ ಕಛೇರಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ರೈಲ್ವೆ ಸಮಾನಂತರ ರಸ್ತೆ, ಗಾಂಧಿನಗರ, ತುಮಕೂರು**

**ಮರಳು ಹರಾಜು ಅಧಿಸೂಚನೆ**

**ಸಂಖ್ಯೆ: ಗಭೂಇ:ಉನಿತು:ಮರಳು ಹರಾಜು:2006-07, ದಿನಾಂಕ: 26ನೇ ಏಪ್ರಿಲ್ 2006**

**ಮಾನ್ಯ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ಇವರ ದಿನಾಂಕ: 27.04.2006ರ ಅನುಮೋದನೆ**

ತುಮಕೂರು ಜಿಲ್ಲೆಯ, ಶಿರಾ ತಾಲ್ಲೂಕಿನ ತಾವರೆಕೆರೆ ಗ್ರಾಮದ ಹಾಗೂ ಕುಣಿಗಲ್ ತಾಲ್ಲೂಕಿನ ಯಡವಾಣಿ ಮತ್ತು ಅರ್ಜುನಹಳ್ಳಿ ಗ್ರಾಮಗಳ ಸರಹದ್ದಿನಲ್ಲಿ ಅಕ್ರಮವಾಗಿ ಮರಳು ಗಣಿಗಾರಿಕೆ ನಡೆಸಿ ಸಾಧಾರಣ ಮರಳನ್ನು ದಾಸ್ತಾನು ಮಾಡಿರುವುದನ್ನು ವಶಪಡಿಸಿಕೊಳ್ಳಲಾಗಿದೆ. ಸದರಿ ದಾಸ್ತಾನನ್ನು 'ಎಲ್ಲಿದೆಯೋ ಹಾಗೆ' "ಹೇಗಿದೆಯೋ ಹಾಗೆ" ಹರಾಜು ಪ್ರಕ್ರಿಯೆ ಮೂಲಕ ವಿಲೇವಾರಿ ಮಾಡಲಾಗುವುದು. ದಾಸ್ತಾನಿನ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ತಾಲ್ಲೂಕು | ಮರಳು ದಾಸ್ತಾನಿನ ಪ್ರದೇಶದ ವಿವರ | ಸಾಧಾರಣ ಮರಳಿನ ಅಂದಾಜಿನ ಪ್ರಮಾಣ (ಮೆ.ಟನ್ನುಗಳಲ್ಲಿ) | ಭದ್ರತಾ ಠೇವಣಿ (ಇ.ಎಂ.ಡಿ.) |
|---|---|---|---|---|
| 01 | ಶಿರಾ | ತಾವರೆಕೆರೆ ಗ್ರಾಮ, ಸರ್ವೆ ನಂ.64, 65, 66, 67, 68:1, 155:1ಪಿ, 155:3, 159:6ಎ ಮತ್ತು 160<br>**ಚೆಕ್ಕು ಬಂದಿ**<br>ಪೂರ್ವಕ್ಕೆ: ದ್ವಾರಾಳು ಗಡಿ ಮತ್ತು ಚಿಕ್ಕಗೌಡ ಬಿನ್ ತಾರೆಗೌಡರ ಜಮೀನು.<br>ಪಶ್ಚಿಮಕ್ಕೆ: ತಾವರೆಕೆರೆ ಗ್ರಾಮ<br>ಉತ್ತರಕ್ಕೆ: ಸರ್ಕಾರಿ ಹಳ್ಳ ಮತ್ತು ಶ್ರೀ ಟಿ.ಆರ್. ನಾಗರಾಜು ಬಿನ್ ರಂಗಪ್ಪ ಇವರ ಜಮೀನು<br>ದಕ್ಷಿಣಕ್ಕೆ: ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 4 | 1800 | 45,000-00 ರೂ.ಗಳು |
| 02 | ಕುಣಿಗಲ್ | ಅರ್ಜುನಹಳ್ಳಿ, ಸರ್ವೆ ನಂ.4<br>**ಚೆಕ್ಕು ಬಂದಿ**<br>ಪೂರ್ವಕ್ಕೆ: ಶಿವರಾಮಯ್ಯ ಬಿನ್ ಸಂಜೀಗೌಡರ ಜಮೀನು<br>ಪಶ್ಚಿಮಕ್ಕೆ: ಕುಣಿಗಲ್-ದುದ್ದಾ ರಸ್ತೆ<br>ಉತ್ತರಕ್ಕೆ: ಶಿವರಾಮಯ್ಯ ಬಿನ್ ಕೆಂಚಪ್ಪನವರ ಜಮೀನು<br>ದಕ್ಷಿಣಕ್ಕೆ: ಶಿವರಾಮಯ್ಯ ಬಿನ್ ಹುಚ್ಚೀಗೌಡರ ಜಮೀನು. | 100 | 2,500-00 ರೂ.ಗಳು |
| 03 | ಕುಣಿಗಲ್ | ಯಡವಾಣಿ, ಸರ್ವೆ ನಂ.105<br>**ಚೆಕ್ಕು ಬಂದಿ**<br>ಪೂರ್ವಕ್ಕೆ: ಶಿವರಾಮಯ್ಯ ಬಿನ್ ಬಿಳಿಗೌಡರ ಜಮೀನು<br>ಪಶ್ಚಿಮಕ್ಕೆ: ಸರ್ಕಾರಿ ಹಳ್ಳ<br>ಉತ್ತರಕ್ಕೆ: ಶಿವರಾಮಯ್ಯ ಬಿನ್ ಬಿಳಿಗೌಡರ ಜಮೀನು<br>ದಕ್ಷಿಣಕ್ಕೆ: ಶಿವರಾಮಯ್ಯ ಬಿನ್ ಬಿಳಿಗೌಡರ ಜಮೀನು ಮತ್ತು ಶಿಂಶಾ ನದಿ. | 650 | 16,250-00 ರೂ.ಗಳು |

ಮೇಲೆ ತಿಳಿಸಿದ ಸಾಧಾರಣ ಮರಳು ದಾಸ್ತಾನಿನ ಬಹಿರಂಗ ಹರಾಜು ಪ್ರಕ್ರಿಯೆಯನ್ನು ದಿನಾಂಕ: 12.05.2006 ರಂದು ಶಿರಾ ತಾಲ್ಲೂಕಿನ ತಹಶೀಲ್ದಾರರ ಕಛೇರಿಯಲ್ಲಿ ಮತ್ತು ದಿನಾಂಕ: 11.05.2006 ರಂದು ಕುಣಿಗಲ್ ತಾಲ್ಲೂಕಿನ ತಹಶೀಲ್ದಾರರ ಕಛೇರಿಯಲ್ಲಿ ಸಂಬಂಧಿಸಿದ ಉಪವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಬೆಳಿಗ್ಗೆ 11-00 ಗಂಟೆಗೆ ನಡೆಸಲಾಗುವುದು. ಇಚ್ಛೆಯುಳ್ಳ ಸಾರ್ವಜನಿಕರು ಹರಾಜಿಗೆ ಸಂಬಂಧಿಸಿದ ಷರತ್ತು ಹಾಗೂ ನಿಬಂಧನೆ ಹಾಗೂ ಇತರೆ ವಿವರಗಳನ್ನು ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ತುಮಕೂರು ಇವರಿಂದ ಪಡೆಯಬಹುದು. ಆಸಕ್ತಿವುಳ್ಳ ಸಾರ್ವಜನಿಕರು ಸಂಗ್ರಹಿಸಿರುವ ಮರಳು ಪ್ರದೇಶವನ್ನು ಖಾತ್ರಿ ಪಡಿಸಿಕೊಂಡು ಹರಾಜಿನಲ್ಲಿ ಭಾಗವಹಿಸಲು ತಿಳಿಸಿದೆ.

ಉಪ ನಿರ್ದೇಶಕರು,

ಪಿ.ಆರ್. 233 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ತುಮಕೂರು.

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**
**ನೇಮಕಾತಿ ಆದೇಶ**
**ಜಿಲ್ಲಾ ನೋಂದಣಾಧಿಕಾರಿಗಳು, ಮೈಸೂರು ಇವರ ನಡವಳಿಗಳು**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಮೈಸೂರು ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:**
1) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: 142:ಸಿಬ್ಬಂದಿ:ಬ್ಯಾಕ್‌ಲಾಗ್:2001-02, ದಿನಾಂಕ: 08.01.2002.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: ಇಎಸ್‌ಟಿ-1-273/2001-02, ದಿನಾಂಕ: 1.8.2002 (ದಿನಾಂಕ: 8.8.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
4) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ: ಇಎಸ್‌ಟಿ-1-273/2001-02, ದಿನಾಂಕ: 23.11.2004.
5) ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ-56:2004-05, ದಿನಾಂಕ: 01.01.2005.
6) ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ:ಆರ್-142:2001-02, ದಿನಾಂಕ: 22.08.2005.
7) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: ಇಎಸ್‌ಟಿ-1-273/2001-02, ದಿನಾಂಕ: 06.04.2006.

**ಪ್ರಸ್ತಾವನೆ:**

ಈ ಇಲಾಖೆಯ ಮೈಸೂರು ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಮೈಸೂರು ಜಿಲ್ಲೆ | ಮೂರು | ಒಂದು | ನಾಲ್ಕು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (7)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಮೇಲ್ಕಂಡಂತೆ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಇಎಸ್‌ಟಿ/12/2006-07, ದಿನಾಂಕ: 25ನೇ ಏಪ್ರಿಲ್ 2006**

ಉಲ್ಲೇಖ (5) ಮತ್ತು (6) ರ ಈ ಕಛೇರಿಯ ನೇಮಕಾತಿ ಆದೇಶವನ್ನು ಮುಂದುವರಿಸುತ್ತಾ, ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (7) ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ.3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾ ವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | ಕೆ.ಜಿ. ಚಂದ್ರಕಲಾ D/o ಗುರುಪುತ್ರಯ್ಯ C/o ಎಂ.ಸಿ. ಲಕ್ಷ್ಮಿ ನಂ.107, ಕನಕಗಿರಿ ಕೃಪ, ಕಾವೇರಿ ನಗರ, 2ನೇ ಹಂತ ಮಂಡ್ಯ-571401. | SC | 09.07.73 | 29.01.28 | S.S.L.C. 69.333 | ಉಪ ನೋಂದಣಿ ಕಛೇರಿ, ಕೆ.ಆರ್.ನಗರ, ಮೈಸೂರು ಜಿಲ್ಲೆ | ಪರಿಶಿಷ್ಟ ಜಾತಿ ಮಹಿಳಾ ಅಭ್ಯರ್ಥಿ ಮುಖ್ಯಪಟ್ಟಿ |

S.S.L.C. ಅಂಕಪಟ್ಟಿಯ ನೋಂದಣಿ ಸಂಖ್ಯೆ: 283505 ಏಪ್ರಿಲ್ 1989 (ವರ್ಷ)ರ ಪ್ರಕಾರ ಕೆ.ಜಿ. ಚಂದ್ರಕಲಾ ಇವರ ಜನ್ಮ ದಿನಾಂಕವು 09.07.1973 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿ ಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರ್ ಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್ (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ.ಎಲ್. ನಾರಾಯಣ - VS - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.

17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ಯಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್. 232

**ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ**

**DEPARTMENT OF PRINTING STATIONERY AND PUBLICATIONS**

**ಟೆಂಡರ್ ಅಧಿಸೂಚನೆ ಸಂಖ್ಯೆ: ಖರೀದಿ/ಪಿ-219/2006-07, ದಿನಾಂಕ: 21ನೇ ಏಪ್ರಿಲ್ 2006**

**TENDER NOTIFICATION No.Pur/P-219/2006-07, Dated: 21st April 2006**

**ಮುದ್ರಣ, ಬೈಂಡಿಂಗ್ ಮತ್ತು ಲೇಖನ ಸಾಮಗ್ರಿಗಳ ಸರಬರಾಜು ಕುರಿತು**

**FOR THE SUPPLY OF PRINTING, BINDING AND STATIONERY ITEMS**

2006-07ನೇ ಸಾಲಿಗೆ ಸರ್ಕಾರಿ ಕೇಂದ್ರ ಮುದ್ರಣಾಲಯ ಮತ್ತು ಇದರ ಅಧೀನ ಕಾರ್ಯಾಲಯಗಳಿಗೆ ಬೇಕಾಗುವ, ಮುದ್ರಣ, ಬೈಂಡಿಂಗ್ ಮತ್ತು ಲೇಖನ ಸಾಮಗ್ರಿಗಳ ಸರಬರಾಜಿಗಾಗಿ ಇಚ್ಛೆಯುಳ್ಳ, ಕೆ.ಎಸ್.ಟಿ./ಸಿ.ಎಸ್.ಟಿ. ನೋಂದಾಯಿತ ತಯಾರಿಕಾ ಸಂಸ್ಥೆಗಳು ಮತ್ತು ಸರಬರಾಜುದಾರರಿಂದ ಪ್ರತಿ ವಸ್ತುವಿಗೂ ಮೊಹರಾದ ದರಪಟ್ಟಿಯ ಟೆಂಡರನ್ನು ಮಾದರಿಗಳ ಸಹಿತ ಕರೆಯಲಾಗಿದೆ. (ಸರಬರಾಜು ಮಾಡುವ ವಸ್ತುಗಳ ಪಟ್ಟಿಯನ್ನು ಟೆಂಡರ್ ಫಾರಂನ 'ಅನುಬಂಧದಲ್ಲಿ ಲಗತ್ತಿಸಿದೆ. (ಅನುಬಂಧ I, II ಮತ್ತು III,) ನಿಗದಿತ ಟೆಂಡರ್ ನಮೂನೆಗಳನ್ನು (Tender Forms) ನಿರ್ದೇಶಕರು, ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ಸರ್ಕಾರಿ ಮುದ್ರಣಾಲಯ ಪೀಣ್ಯ, ಬೆಂಗಳೂರು ಇಲ್ಲಿ ನಮೂನೆ ಶುಲ್ಕ ರೂ.2000/- (ಎರಡು ಸಾವಿರ ರೂಪಾಯಿಗಳು ಮಾತ್ರ) ಹಾಗೂ ಟೆಂಡರ್ ಫಾರಂಗಳಿಗೆ ಅನ್ವಯಿಸುವ ತೆರಿಗೆ ಶೇ.12 1/2% ರಂತೆ ಒಟ್ಟು ರೂ.250/- (ಇನ್ನೂರ ಐವತ್ತು ರೂಪಾಯಿಗಳನ್ನು) ಮಾತ್ರ ನಿರ್ದೇಶಕರು, ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ಪೀಣ್ಯ, ಬೆಂಗಳೂರು ಇವರ ಹೆಸರಿಗೆ ಸಂದಾಯವಾಗುವಂತೆ ಡಿ.ಡಿ. ರೂಪದಲ್ಲಿ ನಗದು ಶಾಖೆಗೆ ಸಲ್ಲಿಸಿ ರಸೀದಿ ಮತ್ತು ಟೆಂಡರ್ ಫಾರಂಗಳನ್ನು ದಿನಾಂಕ: 22.05.2006 ರಂದು ಸಂಜೆ 4.30 ಒಳಗೆ ಖುದ್ದಾಗಿ ಪಡೆದುಕೊಳ್ಳಬಹುದಾಗಿದೆ. ಮುದ್ರಣ, ಬೈಂಡಿಂಗ್ ಮತ್ತು ಲೇಖನ ಸಾಮಗ್ರಿಗಳ ವಿವರ ಮತ್ತು ಮಾದರಿಗಳ ಸಹಿತ ಹಾಗೂ ದಾಖಲಾತಿಗಳನ್ನು ಒಳಗೊಂಡ (ಟೆಕ್ನಿಕಲ್ ಬಿಡ್) ಮೊಹರಾದ ಟೆಂಡರ್ ಲಕೋಟೆ-I ನ್ನು, ಹಾಗೂ ಆರ್ಥಿಕ ಬಿಡ್ (ಫೈನಾನ್ಷಿಯಲ್ ಬಿಡ್) ಲಕೋಟೆ-II ರಲ್ಲಿ ಪ್ರತ್ಯೇಕವಾಗಿ ದಿನಾಂಕ: 23.05.2006ರ ಸಂಜೆ 4.30 ಗಂಟೆಯವರೆಗೆ ಮೊಹರಾದ ಟೆಂಡರನ್ನು ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಮೊಹರಾದ ಲಕೋಟೆ-I ರಲ್ಲಿ ರೂ.30,000/- ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಪಡೆದು ಮೊಹರಾದ ಟೆಂಡರ್ ಲಕೋಟೆ-I ರಲ್ಲಿ ಲಗತ್ತಿಸಿರಬೇಕು. ಮೊಹರಾದ ಲಕೋಟೆ-Iನ್ನು ಹಾಜರಿರುವ ಟೆಂಡರ್‌ದಾರರ ಪ್ರತಿನಿಧಿಗಳ ಎದುರು ದಿನಾಂಕ: 24.05.2006 ರಂದು ಮಧ್ಯಾಹ್ನ 3.00 ಗಂಟೆಗೆ ತೆರೆಯಲಾಗುವುದು. ಟೆಂಡರ್ ಷರತ್ತಿನ ಅನುಸಾರ ಮುಂಗಡ ಠೇವಣಿ ಪಾವತಿಸಿದ ಮತ್ತು ಟೆಂಡರ್ ನಿಯಮಗಳ ಪ್ರಕಾರ ದಾಖಲಾತಿಗಳನ್ನು ಒದಗಿಸದ ಹಾಗೂ ಮಾದರಿಗಳನ್ನು ಸಲ್ಲಿಸದ ಸಂಸ್ಥೆಯ ಟೆಂಡರ್‌ರನ್ನು ತಿರಸ್ಕರಿಸಲಾಗುವುದು. ಅರ್ಹ ಟೆಂಡರ್‌ದಾರರ ಲಕೋಟೆ-IIನ್ನು ಹಾಜರಿದ್ದ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 25.05.2006 ರಂದು ತೆರೆಯಲಾಗುವುದು.

ಹೆಚ್ಚಿ ನ ಮಾಹಿತಿಯನ್ನು ಕಛೇರಿ ಕೆಲಸದ ದಿನಗಳಂದು ಕಛೇರಿ ಸಮಯದ ವೇಳೆಯಲ್ಲಿ ಪಡೆಯಬಹುದಾಗಿದೆ.

Sealed Tenders are invited from the intending Manufactures and Suppliers for the Supply of Printing, Binding and Stationery items (list of the items enclosed in the Tender forms Annexure, I, II & III)

The Tender forms can be obtained from office of the Directorate of Printing Stationery and Publications Government Central Press Peenya Bangalore-58. In the cash section, by Paying an amount Rs.2000/- (Rupees Two thousand only) Plus 12 1/2% VAT of Rs.250/- by way of separate DD drawn if favour of Director Printing Stationery and Publications Bangalore on or before 22.05.2006 **In Person.** The

separate sealed Technical Bid (Documents) Cover I and Financial Bid Cover-II along with samples for each items shall reach to this office on or before 23.05.2006 before 4.30 P.M. Tenderers should enclose E.M.D. of Rs.30,000/- by way of Bank demand Draft in Cover-I only, in favour of Director, Printing, Stationery & Publications, Bangalore. The Tenderer should submit their tender alongwith D.D., Documents and sample for each item. Otherwise your quotation will be rejected outright. The Technical bid Cover-I will be opened in this office on 24.05.2006 at 3.00 P.M. The eligible Tenderers Financial Bid Cover-II will be opened on 25.05.2006 at 3.00 P.M. in the presence of the representatives of the tenders.

Any other information may be obtained from this office during the office working hours.

**TERMS AND CONDITIONS OF COVER-I**

1) Copy of Registration Certificate under the Karnataka Sales Tax/VAT with copy of latest (November 2005) in (Prescribed form) for 2004-2005 monthly returns filed and including annual report with sales tax/VAT authorities to be furnished.

1) ಟೆಂಡರ್‌ದಾರರು, ಕರ್ನಾಟಕ ಮಾರಾಟ ತೆರಿಗೆ ನೋಂದಾಯಿತ ದೃಢೀಕರಣ ಪ್ರತಿ ಹಾಗೂ ನಿಗದಿತ ನಮೂನೆಯಲ್ಲಿ (ನವೆಂಬರ್ 2005ರ) ನವೀಕರಣ ಪ್ರತಿ (ಮಾಸಿಕ ತೆರಿಗೆ ಸಂದಾಯ ಪ್ರತಿ) ಗಳನ್ನು ವಾರ್ಷಿಕ ವರದಿಯೊಂದಿಗೆ ತೆರಿಗೆ ಅಧಿಕಾರಿಗಳಿಂದ ದೃಢೀಕರಿಸಿದ ಬಗ್ಗೆ ಪ್ರಮಾಣಪತ್ರವನ್ನು ಪಡೆದು ಲಗತ್ತಿಸಿರಬೇಕು.

2) Income Tax Returns filed along with acknowledgement for the past 3 years to be furnished (2002-2003, 2003-2004 and 2004-2005)

2) ಟೆಂಡರ್‌ದಾರರು ಈ ಹಿಂದಿನ 3 ವರ್ಷಗಳ (2002-2003, 2003-2004) ಮತ್ತು (2004-2005)ರ ಅವಧಿಯಲ್ಲಿ ಆದಾಯ ತೆರಿಗೆಯನ್ನು ಪಾವತಿ ಮಾಡಿರುವ ಬಗ್ಗೆ 2004-05ನೇ ಸಾಲಿನ ಆದಾಯ ತೆರಿಗೆ ಅಸೆಸ್‌ಮೆಂಟ್‌ನೊಂದಿಗೆ ತೆರಿಗೆ ಅಧಿಕಾರಿಗಳಿಂದ ಪಡೆದ ಸ್ವೀಕೃತಿ ಪತ್ರವನ್ನು ಪಡೆದು ಲಗತ್ತಿಸಿರಬೇಕು.

3) Audited balance sheet for the last 3 years in case of turn over of tenderer for more than 5 Lakhs (Rupees Five Lakhs Only) and in other cases the account duely certified by the chartered accountant to be furnished

3) ಟೆಂಡರ್‌ದಾರರು ಕಳೆದ 3 ವರ್ಷಗಳಲ್ಲಿ ಸಂಸ್ಥೆಯ ಲಾಭ ಮತ್ತು ನಷ್ಟಗಳ ಬಗ್ಗೆ ಲೆಕ್ಕ ಪರಿಶೋಧಕರಿಂದ ದೃಢೀಕರಣ ಪತ್ರ ಹಾಗೂ ರೂ.5 ಲಕ್ಷ ರೂಪಾಯಿಗಳಷ್ಟು ವಾರ್ಷಿಕ ವಹಿವಾಟು ಮಾಡಿರುವುದರ ಬಗ್ಗೆ ಚಾರ್ಟೆಡ್ ಅಕೌಂಟೆಂಟ್‌ರವರಿಂದ ಮಾಡಿಸಿದ ದೃಢೀಕರಣ ಪತ್ರ ಲಗತ್ತಿಸಿರಬೇಕು.

4) Tenderer should furnish interest free earnest money deposit of Rs.30,000/- (Rupees Thirty Thousand only) by way of Demand Draft in favour of the Director, Printing, Stationery and Publications, Bangalore-58 in Cover-I only, failing which a tender will be rejected outright and their bids will be returned.

4) ಟೆಂಡರ್‌ದಾರರು ತಮ್ಮ ದರಪಟ್ಟಿಯೊಂದಿಗೆ ಬಡ್ಡಿರಹಿತ ಭದ್ರತಾ ಠೇವಣಿ ರೂ.30,000/- (ಮೂವತ್ತು ಸಾವಿರ ರೂಪಾಯಿಗಳು ಮಾತ್ರ) ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು-58 ಇವರ ಹೆಸರಿಗೆ ಸಂದಾಯವಾಗುವಂತೆ ಪಡೆದು ಲಕೋಟೆ-I ರಲ್ಲಿಯೇ ಲಗತ್ತಿಸಿರಬೇಕು. ಡಿ.ಡಿ.ಯನ್ನು ಲಗತ್ತಿಸದ ಟೆಂಡರ್‌ನ್ನು ಸಾರಾಸಗಟಾಗಿ ತಿರಸ್ಕರಿಸಲಾಗುವುದು. ಮತ್ತು ಸದರಿಯವರ ಲಕೋಟೆ-II ತೆರೆಯದೆ ಹಿಂದಿರುಗಿಸಲಾಗುವುದು.

**TERMS AND CONDITIONS OF COVER-II**

1) The tenderer should quote the rate for each items in Kg., /Unit,/No.,/Meter,/Yard and Liter Ream and packet etc.,

1) ಟೆಂಡರ್‌ದಾರರು ಪ್ರತಿ ವಸ್ತುವಿಗೂ ಪ್ರತ್ಯೇಕ ದರಪಟ್ಟಿಯಲ್ಲಿ ಪ್ರತಿ ಕೆ.ಜಿ.ಗೆ,/ಪ್ರತಿ ಯೂನಿಟ್‌ಗೆ,/ಪ್ರತಿ ಸಂಖ್ಯೆಗೆ/ಮತ್ತು ಪ್ರತಿ ಮೀಟರ್‌ಗೆ/ ಮತ್ತು ಪ್ರತಿ ಲೀಟರ್‌ಗೆ, ರೀಮ್‌ಗೆ, ಮತ್ತು ಪ್ಯಾಕೇಟ್‌ಗೆ ತಪ್ಪದೆ ದರಗಳನ್ನು ಸೂಚಿಸಬೇಕು.

2) The sealed tender should be quoted in Cover-I and Cover-II "Quotations for the supply of printing, binding and stationery articles to Government Press" The sealed tender will be accepted upto 4.30 pm on 23.5.2006 (both Cover-I and Cover-II). Cover-I will be opened in the presence of the representatives of the tenderers in this office on 24.05.2006 at 3.00 pm. Financial bid Cover-II will be opened on 25.05.2006 at 3.00 P.M.

2) ಟೆಂಡರ್‌ದಾರರು ಮೊಹರು ಮಾಡಿದ ಲಕೋಟೆ-I ಮತ್ತು IIರ ಮೇಲೆ "ಮುದ್ರಣ, ಬೈಂಡಿಂಗ್ ಮತ್ತು ಲೇಖನ ಸಾಮಗ್ರಿಗಳ ಸರಬರಾಜಿಗಾಗಿ" ಎಂದು ದಪ್ಪ ಅಕ್ಷರಗಳಲ್ಲಿ ನಿರ್ದಿಷ್ಟವಾಗಿ ನಮೂದಿಸಿರಬೇಕು. ಮೊಹರು ಮಾಡಿದ ಲಕೋಟೆ-I ಮತ್ತು II ನ್ನು ದಿನಾಂಕ: 23.05.2006 ರವರೆಗೆ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು ಇಲ್ಲಿ ಸ್ವೀಕರಿಸಲಾಗುವುದು. ಮೊಹರಾದ ಲಕೋಟೆ-Iನ್ನು ದಿನಾಂಕ: 24.05.2006 ರಂದು ಮಧ್ಯಾಹ್ನ 3.00 ಗಂಟೆಗೆ ಹಾಜರಿರುವ ಪ್ರತಿನಿಧಿಗಳ ಮುಂದೆ ನಿರ್ದೇಶಕರು, ಸರ್ಕಾರಿ

ಮುದ್ರಣಾಲಯ, ಪೀಣ್ಯ, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಅರ್ಹ ಟೆಂಡರ್‌ದಾರರ ಲಕೋಟೆ-II ನ್ನು ದಿನಾಂಕ: 25.05.2006 ರಂದು ಮಧ್ಯಾಹ್ನ 3.00 ಗಂಟೆಗೆ ತೆರೆಯಲಾಗುವುದು.

3) The rate quoted should be valid upto the end of financial year 2006-2007 or until further orders by the competent authority whichever is earlier.

3) ದರಪಟ್ಟಿಯಲ್ಲಿ ಸೂಚಿಸಿರುವ ದರಗಳು ಟೆಂಡರ್ ತೆರೆದ ದಿನಾಂಕದಿಂದ 1 ವರ್ಷದವರೆಗೆ ಅಂದರೆ 2006-2007ನೇ ಸಾಲಿನ ಆರ್ಥಿಕ ವರ್ಷದವರೆಗೆ ಅಥವಾ ಈ ಇಲಾಖೆಯ ಮುಂದಿನ ಆದೇಶದವರೆಗೆ ಸಿಂಧುತ್ವ ಹೊಂದಿರಬೇಕು.

4) The Director of Printing, Stationery and Publications reserves the right of accept or rejecting any tender for and on behalf of the Government of Karnataka without assigning any reasons so doing.

4) ಟೆಂಡರ್ ಯಾವುದೇ ಕಾರಣವನ್ನು ನೀಡದೆ ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಇಲಾಖೆಯ ನಿರ್ದೇಶಕರದಾಗಿರುತ್ತದೆ. ಈ ವಿಚಾರದಲ್ಲಿ ಉಂಟಾಗುವ ಯಾವುದೇ ವಿವಾದಗಳಲ್ಲಿ ಈ ಇಲಾಖೆಯ ನಿರ್ದೇಶಕರದೇ ಅಂತಿಮ ತೀರ್ಮಾನವಾಗಿರುತ್ತದೆ.

5) The validity of rates quoted should be for one year, for any reasons and any circumstances rate quoted will not be changed.

5) ದರಪಟ್ಟಿಯಲ್ಲಿ ಸೂಚಿಸಿರುವ ದರಗಳು ಒಂದು ವರ್ಷದವರೆಗೆ ಸಿಂಧುತ್ವವನ್ನು ಹೊಂದಿರಬೇಕು. ಯಾವುದೇ ಸಂದರ್ಭದಲ್ಲಿ ಅಥವಾ ಸನ್ನಿವೇಶದಲ್ಲಿ ಬೆಲೆಗಳನ್ನು ಬದಲಾವಣೆ ಮಾಡಲು ಬರುವುದಿಲ್ಲ.

6) The suppliers fails to supply the materials as per this office supply order. The security deposit of Rs.30,000/- (Rupees Thirty Thousand only) will be forfieted to Government Account and the firm name will be included in the black list of this office.

6) ಸರಬರಾಜುದಾರರು ಈ ಇಲಾಖೆಯಿಂದ ಸರಬರಾಜು ಆದೇಶ ಪಡೆದ ನಂತರ ನಿಗದಿತ ಸಮಯದಲ್ಲಿ ಸರಕನ್ನು ಸರಬರಾಜು ಮಾಡಬೇಕು. ತಪ್ಪಿದಲ್ಲಿ ಸದರಿಯವರ ಭದ್ರತಾ ಠೇವಣಿ ರೂ.30,000/- (ರೂ. ಮೂವತ್ತು ಸಾವಿರ ಮಾತ್ರ) ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಆ ಸಂಸ್ಥೆಯ ಹೆಸರನ್ನು ಇಲಾಖೆಯ ಕಪ್ಪುಪಟ್ಟಿಯಲ್ಲಿ ಸೇರಿಸಲಾಗುವುದು.

7) The supplier should be ready to supply from ready stock and delivery Free on Road (FOR) destinations to Govt. Press Bangalore and its Brach Press Dharwad, Gulbarga, Madikeri, Tumkur, Kolar, Shimoga and Mangalore.

7) ಸರಬರಾಜುದಾರರು ಪ್ರತಿ ವಸ್ತುವಿನ ಸಿದ್ದ ದಾಸ್ತಾನು ಹೊಂದಿದ್ದು ಕೂಡಲೇ ಸರಬರಾಜು ಮಾಡುವಂತಿರಬೇಕು. ಹಾಗೂ ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು ಮತ್ತು ಬೆಂಗಳೂರಿನ ಇತರೆ ಕಛೇರಿಗಳು ಮತ್ತು ಶಾಖಾ ಮುದ್ರಣಾಲಯಗಳಾದ ಧಾರವಾಡ, ಗುಲ್ಬರ್ಗ, ಮಡಿಕೇರಿ, ತುಮಕೂರು, ಕೋಲಾರ, ಶಿವಮೊಗ್ಗ ಮತ್ತು ಮಂಗಳೂರು ಇಲ್ಲಿಗೆ ಉಚಿತವಾಗಿ ತಲುಪುವಂತೆ (ಎಫ್.ಒ.ಆರ್. ಡಿಸ್ಟಿನೇಷನ್) ಸರಬರಾಜು ಮಾಡಬೇಕು.

8) Tenders should give the complete description of the Materials including brand makers name the unit of supply should be furnished in the quotations. Samples of each item should invariably sent along with quotations without samples., quotations are likely to be rejected. Samples will not be succeeded unless the brand name, manufacturers is subscribed on the samples. Samples are not returned at any circumstances.

8) ಟೆಂಡರ್‌ದಾರರು ಪ್ರತಿ ವಸ್ತುಗಳ ಬ್ರಾಂಡಿನ ಹೆಸರು ಘಟಕ ಮತ್ತು ದರಗಳನ್ನು ಕಡ್ಡಾಯವಾಗಿ ದರಪಟ್ಟಿಯಲ್ಲಿ ನಮೂದಿಸಿರಬೇಕು. ಮತ್ತು ದರಪಟ್ಟಿಯೊಡನೆ ಪ್ರತಿ ವಸ್ತುವಿನ ಮಾದರಿಗಳನ್ನು ಕಡ್ಡಾಯವಾಗಿ ಕಳುಹಿಸಿರಬೇಕು. ಮಾದರಿಗಳನ್ನು ಕಳುಹಿಸದೆ ಇರುವ ದರಪಟ್ಟಿಗಳನ್ನು ಕಡ್ಡಾಯವಾಗಿ ತಿರಸ್ಕರಿಸಲಾಗುವುದು. ಹಾಗೂ ಪ್ರತಿ ವಸ್ತುವಿನ ಮಾದರಿಗಳ ಮೇಲೆ ವ್ಯಾಪಾರಿ ಸಂಸ್ಥೆ ಮತ್ತು ಮೊಹರು ಇತ್ಯಾದಿ ಇಲ್ಲದೆ ಇರುವ ದರಪಟ್ಟಿಗಳನ್ನು ತಿರಸ್ಕರಿಸಲಾಗುವುದು. ಮಾದರಿಗಳನ್ನು ಯಾವುದೇ ಕಾರಣದಿಂದಲೂ ಹಿಂದಿರುಗಿಸಲಾಗುವುದಿಲ್ಲ.

9) Successful tenderers should enter into agreement with this department regarding rates, terms and conditions on Stamp paper Rs.100/-

9) ವಿಜೇತ ಸರಬರಾಜುದಾರರು ತಾವು ಸರಬರಾಜು ಮಾಡುವ ವಸ್ತುಗಳ ಬಗ್ಗೆ, ದರಗಳು ಮತ್ತು ನಿಬಂಧನೆಗಳ ಬಗ್ಗೆ ರೂ.100/- ಛಾಪಾ ಕಾಗದದಲ್ಲಿ ಈ ಇಲಾಖೆಯೊಂದಿಗೆ ಒಪ್ಪಂದ ಮಾಡಿಕೊಳ್ಳತಕ್ಕದ್ದು.

10) Any other informations required may be obtained from this office during on any working days.

10) ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯ ಯಾವುದೇ ಕೆಲಸದ ದಿವಸದಂದು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿದೆ.

Note: 1) All the certificates and documents must be furnished in the sealed cover-I only.

1) ಎಲ್ಲಾ ದಾಖಲಾತಿಗಳು ಮತ್ತು ಪ್ರಮಾಣ ಪತ್ರಗಳನ್ನು ಕಡ್ಡಾಯವಾಗಿ ಮೊಹರಾದ ಲಕೋಟೆ-I ರಲ್ಲಿ ಸಲ್ಲಿಸಿರಬೇಕು.

2) The Price quotations should be furnished in sealed cover-II only.

2) ದರಗಳಿಗೆ ಸಂಬಂಧಿಸಿದ ಕೊಟೇಷನ್‌ಗಳನ್ನು ಮೊಹರಾದ ಲಕೋಟೆ-II ರಲ್ಲಿ ಸಲ್ಲಿಸಿರಬೇಕು.

PR- 231 Director.

## ಅರಣ್ಯ ಸಂರಕ್ಷಣಾಧಿಕಾರಿಗಳವರ ಕಛೇರಿ, ಶಿವಮೊಗ್ಗ ವೃತ್ತ, ಶಿವಮೊಗ್ಗ

**ಅಧಿಸೂಚನೆ ಸಂಖ್ಯೆ: ಬಿ4:ಎಸ್ಎಎಸ್:ಸಿಆರ್-1:2006-07, ದಿನಾಂಕ: 21ನೇ ಏಪ್ರಿಲ್ 2006**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಕೆಳಗೆ ನಮೂದಿಸಿದ ನಾಟಾ ಸಂಗ್ರಹಾಲಯಗಳಲ್ಲಿ ಲಭ್ಯವಿರುವ ಬೀಟೆ, ಸಾಗುವಾನಿ ಇತರೆ ಜಾತಿ ನಾಟಾಗಳು, ಎಳೆಗಳು ಮತ್ತು ಸೌದೆಯನ್ನು ಆಯಾ ಡಿಪೋವಿನ ಎದುರು ಸೂಚಿಸಿದ ದಿನಾಂಕದಂದು ಬಹಿರಂಗ ಹರಾಜು ಮಾರಾಟದಲ್ಲಿ ವಿಕ್ರಯಿಸಲು ಸಾಮಾನ್ಯ ಅವಗಾಹನೆಗಾಗಿ ಪ್ರಕಟಿಸಿದೆ.

| ಕ್ರ. ಸಂ. | ವಿಭಾಗ ಮತ್ತು ಡಿಪೋದ ಹೆಸರು | ಹರಾಜು ದಿನಾಂಕ | ಹರಾಜಿಗಿಟ್ಟ ನಾಟಾ, ಮತ್ತು ಸೌದೆ, ಆರ್.ಕೆ. ಬಿಲ್ಲೆಟ್ಸ್ ಇತ್ಯಾದಿ ಅಂದಾಜು ಪ್ರಮಾಣ | | | | | | | | | | |
|---|---|---|---|---|---|---|---|---|---|---|---|---|---|
| | | | ಬೀಟೆ | ಸಾಗವಾನಿ | ಇತರೆ ಜಾತಿ | ಅಕೇಶಿಯಾ (ನಾಟಾ) | ನೀಲಗಿರಿ ಟಿಂಬರ್ | ಪೋಲ್ಸ್ | ಬಿಲೆಟ್ಸ್ | ಸೌದೆ | ಸೈಜ್ | ದೇವದಾರಿ | ಬಳ್ಳೀಸ್ |
| 1 | **ಶಿವಮೊಗ್ಗ** | | ಘಮೀ | ಘಮೀ | ಘಮೀ | ಘಮೀ | ಘಮೀ | (ಸಂಖ್ಯೆ) | ಘಮೀ | ಘಮೀ | ಘಮೀ | ಘಮೀ | (ಸಂಖ್ಯೆ) |
| (a) | ಸರ್ಕಾರಿ ನಾಟಾ ಡಿಪೋ, ಆಲ್ಕೋಳ | 21.05.2006 | 7.000 | - | 3.000 | - | - | - | 0.500 | 5.000 | - | - | - |
| (b) | ಸರ್ಕಾರಿ ನಾಟಾ ಡಿಪೋ, ಕುರುವಳ್ಳಿ (ತೀರ್ಥಹಳ್ಳಿ) | 22.05.2006 | 4.000 | 2.500 | 12.700 | 86.500 | - | 2210 (ಆಕೇಶಿಯಾ) | 30.000 (ಆಕೇಶಿಯಾ) | - | 6.300 | 1.500 | |
| 2 | **ಸಾಗರ** | | | | | | | | | | | | |
| (a) | ಸರ್ಕಾರಿ ನಾಟಾ ಡಿಪೋ, ಸಾಗರ | 23.05.2006 & 24.05.2006 (2 days) | 55.986 | 4.057 | ಹೊನ್ನೆ 4.500<br>ಹುನಾಲು 11.999<br>ನೇರಲು 36.400<br>ಜಂಬೆ 8.084<br>ಮತ್ತಿ 6.140<br>ಎತ್ಯಾಗ 16.132<br>ಇತರೆ 34.355 | 131.803 | 630.406 | - | - | 596.315 | 6.133 | - | 747 (ನೀಲಗಿರಿ)<br>116 (ಇತರೆ) |
| (b) | ಸರ್ಕಾರಿ ನಾಟಾ ಡಿಪೋ, ಆನವಟ್ಟಿ | 25.05.2006 | 4.000 | 6.000 | 75.000 | 80.000 | 48.000 | - | - | 20.000 | - | 14.500 | 100 (ಅಕೇಶಿಯಾ)<br>138 (ನೀಲಗಿರಿ) |
| (d) | ಸರ್ಕಾರಿ ನಾಟಾ ಡಿಪೋ, ಹೊಸನಗರ. | 26.05.2006 | 16.142 | - | 107.525 | 48.274 | - | - | 6.700 | 12.684 | - | - | 911 (ಅಕೇಶಿಯಾ) |
| 3 | **ಭದ್ರಾವತಿ** | | | | | | | | | | | | |
| (a) | ಸರ್ಕಾರಿ ನಾಟಾ ಡಿಪೋ, ತರೀಕೆರೆ | 29.05.2006 & 30.05.2006 (2 days) | - | - | 800.00 (ಗಟ್ಟಿ ನಾಟಾ) | - | - | - | - | - | - | - | - |

ಪಿ.ಆರ್. 234

ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ**
**ಸಂಖ್ಯೆ: ಸಿಆಸುಇ 53 ಡಿಸಭೆ 2006, ಬೆಂಗಳೂರು ದಿನಾಂಕ: 2ನೇ ಮೇ 2006.**
**ಟೆಂಡರ್ ಪ್ರಕಟಣೆ**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ನಡೆಯುವ ಸಭೆ:ಸಮಾರಂಭಗಳಿಗೆ ಮತ್ತು ರಾಜಭವನದಲ್ಲಿ ನಡೆಯುವ ಪ್ರಮಾಣ ವಚನ ಸ್ವೀಕಾರ ಮುಂತಾದ ಸಮಾರಂಭಗಳಿಗೆ ಈ ಕೆಳಕಂಡ ಪೀಠೋಪಕರಣಗಳು, ಶಾಮಿಯಾನ, ವೇದಿಕೆ ಮುಂತಾದವುಗಳನ್ನು ದಿನಾಂಕ: 1-7-2006 ರಿಂದ 30-6-2007ರ ಒಂದು ವರ್ಷದ ಅವಧಿಗೆ ದರಗುತ್ತಿಗೆ ಆಧಾರದ ಮೇಲೆ ಬಾಡಿಗೆಗೆ ಸರಬರಾಜು ಮಾಡುವ ಬಗ್ಗೆ ಅನುಭವಸ್ಥ ಹಾಗೂ ಪ್ರಸಿದ್ದ ಸಂಸ್ಥೆಗಳಿಂದ ಟೆಂಡರ್‌ಗಳನ್ನು ಕರೆಯಲಾಗಿದೆ.

| ಕ್ರಮ ಸಂಖ್ಯೆ | ಪೀಠೋಪಕರಣಗಳ ವಿವರ | ಕ್ವಾಂಟಿಟಿ | ದರಗಳು ರೂ. |
|---|---|---|---|
| 1 | ಸ್ಟೀಲ್ ಫೋಲ್ಡಿಂಗ್ ಚೇರ್ | 100 ನಂ | |
| 2 | ಡೆಲ್ಲಿ ಕೇನ್ ಚೇರ್ | 100 ನಂ. | |
| 3 | ಪೋಡಿಯಂ | ಪ್ರತಿಯೊಂದಕ್ಕೆ | |
| 4 | ಪೋಡಿಯಂ ವೆಲ್ವೆಟ್ | ಪ್ರತಿಯೊಂದಕ್ಕೆ | |
| 5 | ಫೆದರ್‌ಲೈಟ್ ಕುಷನ್ ಚೇರ್ | ಪ್ರತಿಯೊಂದಕ್ಕೆ | |
| 6 | ಫೆದರ್‌ಲೈಟ್ ದರ್ಬಾರ್ ಚೇರ್ | ಪ್ರತಿಯೊಂದಕ್ಕೆ | |
| 7 | ವುಡನ್ ಟೇಬಲ್ಸ್ 6 X 2 | ಪ್ರತಿಯೊಂದಕ್ಕೆ | |
| 8 | ವುಡನ್ ಟೇಬಲ್ಸ್ 2 1/2 X 2 1/2 | ಪ್ರತಿಯೊಂದಕ್ಕೆ | |
| 9 | ಸ್ಟೀಲ್ ಫ್ರೇಮ್ಸ್ ಟೇಬಲ್ಸ್ ವಿತ್ ಸ್ಟೀಲ್ ಲೆಗ್ಸ್ | ಪ್ರತಿಯೊಂದಕ್ಕೆ | |
| 10 | ಟೇಬಲ್ ಕ್ಲಾತ್ 7 X 4 | ಪ್ರತಿಯೊಂದಕ್ಕೆ | |
| 11 | ಟೇಬಲ್ ಕ್ಲಾತ್ 4 X 4 | ಪ್ರತಿಯೊಂದಕ್ಕೆ | |
| 12 | ವುಡನ್ ಸ್ಟೇಜ್ ವಿತ್ ಸ್ಟೆಪ್ಸ್ 1 1/2' ಎತ್ತರ | ಸ್ಕ್ವೇರ್‌ಷೀಟ್ | |
| 13 | ವುಡನ್ ಸ್ಟೇಜ್ ವಿತ್ ಸ್ಟೆಪ್ಸ್ 2 1/2' ಎತ್ತರ | ಸ್ಕ್ವೇರ್‌ಷೀಟ್ | |
| 14 | ಶಾಮಿಯಾನ (ಆರ್ಡಿನರಿ) | ಸ್ಕ್ವೇರ್‌ಷೀಟ್ | |
| 15 | ಸೈಡ್‌ವಾಲ್ | ಸ್ಕ್ವೇರ್‌ಷೀಟ್ | |
| 16 | ಬೆಂಚುಗಳು | ಪ್ರತಿಯೊಂದಕ್ಕೆ | |
| 17 | ಸ್ಟೀಲ್ ಫ್ರೇಮ್ ಬೆಂಚ್ ವಿತ್ ಸ್ಟೀಲ್ ಲೆಗ್ಸ್ | ಪ್ರತಿಯೊಂದಕ್ಕೆ | |
| 18 | ರೆಡ್ ಕಾಯಿರ್‌ಮ್ಯಾಟ್ | ಸ್ಕ್ವೇರ್‌ಷೀಟ್ | |
| 19 | ಫೆದರ್‌ಲೈಟ್ ಫೋಮ್ ಕುಷನ್-ಚೇರ್ ವಿತ್ ಆರ್ಮ್ಸ್ | ಪ್ರತಿಯೊಂದಕ್ಕೆ | |
| 20 | ಟೀಪಾಯ್ (ಬಿಗ್) | ಪ್ರತಿಯೊಂದಕ್ಕೆ | |
| 21 | ವಾಟರ್ ಡ್ರಮ್ಸ್ | ಪ್ರತಿಯೊಂದಕ್ಕೆ | |
| 22 | ಸಿಂಟೆಕ್ಸ್ ಟ್ಯಾಂಕ್ಸ್ | ಪ್ರತಿಯೊಂದಕ್ಕೆ | |
| 23 | ವಾಟರ್ ಡ್ರಮ್ (ಹಾಫ್ ಡ್ರಮ್) | ಪ್ರತಿಯೊಂದಕ್ಕೆ | |
| 24 | ಮಗ್ಸ್ | 100 ನಂ | |
| 25 | ವಾಷ್ ಬೇಸಿನ್ (ಸ್ಟೀಲ್) | ಪ್ರತಿಯೊಂದಕ್ಕೆ | |
| 26 | ಚೇರ್ ಕ್ಯಾಪ್ಸ್ | ಪ್ರತಿಯೊಂದಕ್ಕೆ | |
| 27 | ಡೀಲಕ್ಸ್ ವೈರ್ ಚೇರ್ಸ್ | 100 ನಂ | |
| 28 | ಫ್ಲ್ಯಾಟ್ ಫಾರ್ಮ್ ಟೀಪಾಯ್ಸ್ | ಪ್ರತಿಯೊಂದಕ್ಕೆ | |
| 29 | ರೆಡ್ ಫ್ರಿಲ್ಸ್ | ಪ್ರತಿಯೊಂದಕ್ಕೆ | |

| | | | |
|---|---|---|---|
| 30 | ಬ್ಲ್ಯೂ ಫ್ರಿಲ್ಸ್ | ಪ್ರತಿಯೊಂದಕ್ಕೆ | |
| 31 | ಸ್ಟೆಪ್ ಕಾರ್ಪೆಟ್ | ಪ್ರತಿಯೊಂದಕ್ಕೆ | |
| 32 | ರೆಡ್ ಕಾರ್ಪೆಟ್ | ಪ್ರತಿಯೊಂದಕ್ಕೆ | |
| 33 | ನಯಾಗರ ಫೌಂಟೇನ್ (ಬಿಗ್) | ಪ್ರತಿಯೊಂದಕ್ಕೆ | |
| 34 | ಬೆಡ್ ಶೀಟ್ 15X15 | ಪ್ರತಿಯೊಂದಕ್ಕೆ | |
| 35 | ಕಾರ್ಪೆಟ್ | ಸ್ಕ್ವೇರ್‌ಫೀಟ್ | |
| 36 | ಡೆಲ್ಲಿ ಡರ್ಬಾರ್ ಚೇರ್ಸ್ | ಪ್ರತಿಯೊಂದಕ್ಕೆ | |
| 37 | ಪರ್ಷಿಯನ್ ಕಾರ್ಪೆಟ್ | ಸ್ಕ್ವೇರ್‌ಫೀಟ್ | |
| 38 | ವೈಟ್ ಕ್ಲಾತ್ | ಸ್ಕ್ವೇರ್‌ಫೀಟ್ | |
| 39 | ವೆಲ್ವೆಟ್ ಸ್ಕ್ರೀನ್ಸ್ | ಸ್ಕ್ವೇರ್‌ಫೀಟ್ | |
| 40 | ಪ್ಲಾಸ್ಟಿಕ್ ಚೇರ್ಸ್ | 100 ನಂ | |
| 41 | ಪ್ಲಾಸ್ಟಿಕ್ ಚೇರ್ಸ್ ವಿತ್ ಆರ್ಮ್ಸ | 100 ನಂ | |
| 42 | ಫ್ಲ್ಯಾಗ್ ಪೋಲ್ ವಿತ್ ಕ್ಲಾತ್ ಬ್ಯಾಂಡ್ | ಪ್ರತಿಯೊಂದಕ್ಕೆ | |
| 43 | ಟಬುಲರ್ ಸೋಫಾ (ಸಿಂಗಲ್) | ಪ್ರತಿಯೊಂದಕ್ಕೆ | |
| 44 | ಟಬುಲರ್ ಸೋಫಾ (ಡಬಲ್) | ಪ್ರತಿಯೊಂದಕ್ಕೆ | |
| 45 | ಟಬುಲರ್ ಸೋಫಾ (3 ಸೀಟರ್) | ಪ್ರತಿಯೊಂದಕ್ಕೆ | |
| 46 | ಡ್ರೆಸ್ಸಿಂಗ್ ಮಿರರ್ಸ್ | ಪ್ರತಿಯೊಂದಕ್ಕೆ | |
| 47 | ಕ್ಯಾನೋಪಿ | ಪ್ರತಿಯೊಂದಕ್ಕೆ | |
| 48 | ವುಲನ್ ಕಾರ್ಪೆಟ್ಸ್ | ಸ್ಕ್ವೇರ್‌ಫೀಟ್ | |
| 49 | ಸೋಫಾ (ಬ್ರ್ಯಾಸ್) | ಪ್ರತಿಯೊಂದಕ್ಕೆ | |
| 50 | ಸಿಂಥೆಟಿಕ್ ಕಾರ್ಪೆಟ್ | ಸ್ಕ್ವೇರ್‌ಫೀಟ್ | |
| 51 | ದೊಡ್ಡ ದೀಪದ ಕಂಬ | ಪ್ರತಿಯೊಂದಕ್ಕೆ | |
| 52 | ಬ್ಯಾಕ್ ಡ್ರಾಪ್ | ಪ್ರತಿಯೊಂದಕ್ಕೆ | |
| 53 | ರೌಂಡ್ ಟೇಬಲ್ ವಿತ್ ಕ್ಲಾತ್ | ಪ್ರತಿಯೊಂದಕ್ಕೆ | |
| 54 | VVIP ಕುರ್ಚಿ | ಪ್ರತಿಯೊಂದಕ್ಕೆ | |

**ಷರತ್ತು ಮತ್ತು ನಿಬಂಧನೆಗಳು:**

1. ನಮೂದಿಸಿರುವ ದರಗಳಲ್ಲಿ ಪೀಠೋಪಕರಣಗಳ ಸಾಗಾಣಿಕೆ ವೆಚ್ಚ ಹಾಗೂ ಲೇಬರ್ ವೆಚ್ಚವು ಸೇರಿ ನಮೂದಿಸತಕ್ಕದ್ದು.
2. ಪೀಠೋಪಕರಣಗಳನ್ನು ಎರಡನೇ ದಿನ ಮತ್ತು ನಂತರದ ದಿನಗಳಿಗೆ ಉಪಯೋಗಿಸಿದಲ್ಲಿ ಸಂಸ್ಥೆಯು ಬಾಡಿಗೆ ವೆಚ್ಚದಲ್ಲಿ ಶೇಕಡಾ 25 ರಿಯಾಯಿತಿ ನೀಡತಕ್ಕದ್ದು.
3. ಒಳ್ಳೆಯ ಗುಣಮಟ್ಟದ ಹಾಗೂ ಸ್ವಚ್ಚವಾಗಿರುವ ಪೀಠೋಪಕರಣಗಳನ್ನೇ ಸಂಸ್ಥೆಯು ಸರಬರಾಜು ಮಾಡತಕ್ಕದ್ದು
4. ಟೆಂಡರ್‌ನೊಂದಿಗೆ ಇ.ಎಂ.ಡಿ (ಠೇವಣಿ) ಮೊತ್ತ ರೂ. 30,000-00 ಕ್ಕೆ ಬ್ಯಾಂಕ್ ಡ್ರಾಫ್ಟನ್ನು **ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ)** ಇವರ ಹೆಸರಿಗೆ ಸಲ್ಲಿಸತಕ್ಕದ್ದು. ಇ.ಎಂ.ಡಿ ಸಂಬಂಧ ಬ್ಯಾಂಕ್ ಡ್ರಾಫ್ಟ್ ಲಗತ್ತಿಸಿರದ ಟೆಂಡರನ್ನು ತಿರಸ್ಕರಿಸಲಾಗುವುದು
5. ಅಗತ್ಯವಿದ್ದರೆ ರಜಾ ದಿನಗಳಲ್ಲೂ ಹಾಗೂ ತುರ್ತು ಪ್ರಕರಣಗಳಲ್ಲಿ ಅತ್ಯಂತ ಕಡಿಮೆ ಕಾಲಾವಕಾಶದಲ್ಲಿ ಪೀಠೋಪಕರಣಗಳನ್ನು ಸರಬರಾಜು ಮಾಡಲು ಸಂಸ್ಥೆಯು ಬದ್ಧವಾಗಿರತಕ್ಕದ್ದು.
6. ದೊಡ್ಡ ಪ್ರಮಾಣದಲ್ಲಿ ಸಭೆ/ಸಮಾರಂಭಗಳಿಗೆ ಪೀಠೋಪಕರಣ, ವೇದಿಕೆಗಳನ್ನು ಏರ್ಪಾಡು ಮಾಡಿ ಅನುಭವ ಇರುವಂತಹ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು
7. ಸರಬರಾಜು ಮಾಡುವ ಪೀಠೋಪಕರಣಗಳ ಏರ್ಪಾಡು ತೃಪ್ತಿಕರವಾಗಿರದಿದ್ದಲ್ಲಿ ಅಥವಾ ಉತ್ತಮ ಗುಣಮಟ್ಟದ ಹಾಗೂ ಸ್ವಚ್ಚವಾದ ಪೀಠೋಪಕರಣ, ಶಾಮಿಯಾನ ಇತ್ಯಾದಿಗಳನ್ನು ಸಂಸ್ಥೆಯು ಸರಬರಾಜು ಮಾಡದಿದ್ದಲ್ಲಿ ಮತ್ತು ಕಡಿಮೆ ಕಾಲಾವಕಾಶದಲ್ಲಿ ಪೀಠೋಪಕರಣಗಳನ್ನು ಸರಬರಾಜು ಮಾಡಲು

ವಿಫಲರಾದಲ್ಲಿ, ಅವಧಿಗೆ ಮೊದಲೇ ಗುತ್ತಿಗೆಯನ್ನು ರದ್ದುಗೊಳಿಸಲು ಮತ್ತು ಇ.ಎಂ.ಡಿ ಮೊತ್ತ (ಭದ್ರತಾ ಠೇವಣಿ) ಯನ್ನು ಮುಟ್ಟುಗೋಲು ಹಾಕುವ ಹಕ್ಕನ್ನು ಸರ್ಕಾರ ಕಾದಿರಿಸಿದೆ.

8. ಮೊಹರಾದ ಟೆಂಡರ್‌ಗಳ ಲಕೋಟೆಯ ಮೇಲೆ **ಬಾಡಿಗೆ ಆಧಾರದ ಮೇಲೆ ಪೀಠೋಪಕರಣಗಳ ಸರಬರಾಜು ದರಗುತ್ತಿಗೆ** ಎಂದು ಬರೆಯತಕ್ಕದ್ದು.
9. ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಹಣವನ್ನು ಭದ್ರತಾ ಠೇವಣಿಯಾಗಿ ಇಟ್ಟುಕೊಳ್ಳಲಾಗುವುದು. ಗುತ್ತಿಗೆ ಅವಧಿ ಮುಗಿದ ಮೇಲೆ ಯಾವುದೇ ದೂರು ಇಲ್ಲದಿದ್ದಲ್ಲಿ ಬಡ್ಡಿರಹಿತವಾಗಿ ಹಿಂದಿರುಗಿಸ ಲಾಗುವುದು.
10. ತುರ್ತು ಪ್ರಕರಣದಲ್ಲಿ ಕೇವಲ 4 ಅಥವಾ 5 ಗಂಟೆಯ ಕಾಲಾವಕಾಶದಲ್ಲಿ ಪೀಠೋಪಕರಣ, ಶಾಮಿಯಾನ, ವೇದಿಕೆ ಸಿದ್ಧಪಡಿಸುವ ಸಂದರ್ಭಗಳಿದ್ದು, ಈ ಸಂಬಂಧ ಎಲ್ಲಾ ಏರ್ಪಾಡುಗಳನ್ನು ಯಾವುದೇ ಕಾರಣ ನೀಡದೆ ಸಿದ್ಧಗೊಳಿಸಲು ಶಕ್ತ ಇರುವ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು
11. ಗುತ್ತಿಗೆ ಅವಧಿಯು ದಿನಾಂಕ: 1.7.2006ರಿಂದ ಒಂದು ವರ್ಷದ ಅವಧಿಯವರೆಗೆ ಇರುತ್ತದೆ.
12. ಅಯಶಸ್ವಿ ಟೆಂಡರುದಾರರ ಬ್ಯಾಂಕ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು.
13. ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ, ಗುತ್ತಿಗೆಯನ್ನು ರದ್ದುಪಡಿಸಲು ಮತ್ತು ಇ.ಎಂ.ಡಿ (ಭದ್ರತಾ ಠೇವಣಿ) ಯನ್ನು ಮುಟ್ಟುಗೋಲು ಹಾಕುವ ಹಕ್ಕನ್ನು ಸರ್ಕಾರ ಕಾಯ್ದಿರಿಸಿದೆ.
14. ಗುತ್ತಿಗೆದಾರರು ತಮ್ಮಲ್ಲಿರುವ ಮಾನವ ಶಕ್ತಿ, ಪೀಠೋಪಕರಣ, ಶಾಮಿಯಾನ ಇತ್ಯಾದಿಗಳ ವಿವರಗಳನ್ನು ಒದಗಿಸತಕ್ಕದ್ದು
15. ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ:1-6-2006 ರಂದು ಮಧ್ಯಾಹ್ನ 3-00 ಗಂಟೆಯವರೆಗೆ, ಸಿಆಸುಇ (ಕಾರ್ಯಕಾರಿ) ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು-1 ಈ ಕಚೇರಿಗೆ ಸಲ್ಲಿಸತಕ್ಕದ್ದು. ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
16. ಟೆಂಡರ್‌ಗಳನ್ನು ದಿನಾಂಕ:1-6-2006ರಂದು ಮಧ್ಯಾಹ್ನ 4-00 ಗಂಟೆಗೆ ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ) ಕೊಠಡಿ ಸಂಖ್ಯೆ: 23, ವಿಧಾನಸೌಧ, ಇವರ ಕಚೇರಿಯಲ್ಲಿ ತೆರೆಯಲಾಗುವುದು.
17. ಯಾವುದೇ ಕಾರಣವನ್ನು ನೀಡದೆ, ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಅಧಿಕಾರಿಯವರು ಕಾದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ ರವಿಮೂರ್ತಿ**

ಪಿ.ಆರ್. 237

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಕಾರ್ಯಕಾರಿ-1)

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೇಮಕಾತಿ ಆದೇಶ

### ಜಿಲ್ಲಾ ನೋಂದಣಾಧಿಕಾರಿಗಳು, ಕೊಪ್ಪಳ, ಇವರ ನಡವಳಿಗಳು

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕೊಪ್ಪಳ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:**
1) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: ಜಿನೋಕೊ:ಬ್ಯಾಕ್‌ಲಾಗ್:2001-02/634, ದಿನಾಂಕ: 17.01.2002.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: ಇಎಸ್‌ಟಿ-1-273/2001-02, ದಿನಾಂಕ: 01.08.2002 (ದಿನಾಂಕ: 08.08.2002ರ ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ)
4) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ: ಇಎಸ್‌ಟಿ-1-273/2001-02, ದಿನಾಂಕ: 23.11.2004.
5) ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಜಿ.ನೋ.ಕೊ:ಸಿಬ್ಬಂದಿ: 2004-05 1070-1073, ದಿನಾಂಕ: 27.12.2004.
6) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: ಇಎಸ್‌ಟಿ-1-273/2001-02, ದಿನಾಂಕ: 06.04.2006.

**ಪ್ರಸ್ತಾವನೆ:**

ಈ ಇಲಾಖೆಯ ಕೊಪ್ಪಳ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಕೊಪ್ಪಳ ಜಿಲ್ಲೆ | ಒಂದು | ಒಂದು | ಎರಡು |

ಈ ಬ್ಯಾಕ್‌ಲಾಗ್ ಹುದ್ದೆಗಳು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (6)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಮೇಲ್ಕಂಡ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಜಿ.ನೊ.ಕೊ / ಸಿಬ್ಬಂದಿ / 2 / 2006-07 61-64, ದಿನಾಂಕ: 24ನೇ ಏಪ್ರಿಲ್ 2006**

ಉಲ್ಲೇಖ (5)ರ ಈ ಕಛೇರಿಯ ನೇಮಕಾತಿ ಆದೇಶವನ್ನು ಮುಂದುವರಿಸುತ್ತಾ, ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (6) ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ.3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿ ಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | ರಾಮಪ್ಪ ಪಿ. ಲಮಾಣಿ S/o ಬಾಬು ಪಾಂಡಪ್ಪ ಲಮಾಣಿ, ಮು: ಅಂಚೆ : ಆಲಮಟ್ಟಿ RS ತಾ: ಬಸವನ ಬಾಗೇವಾಡಿ ಜಿ: ಬಿಜಾಪೂರ. | SC | 01.06.1973 | 29.03.06 | S.S.L.C. 66.00 | ಉಪ ನೋಂದಣಿ ಕಛೇರಿ, ಗಂಗಾವತಿ ಕೊಪ್ಪಳ ಜಿಲ್ಲೆ | ಪರಿಶಿಷ್ಟ ಜಾತಿ ಯೋಜನಾ ನಿರಾಶ್ರಿತ ಅಭ್ಯರ್ಥಿ ಮುಖ್ಯಪಟ್ಟಿ |

S.S.L.C. ಅಂಕಪಟ್ಟಿಯ ನೋಂದಣಿ ಸಂಖ್ಯೆ: 167031 / ಏಪ್ರಿಲ್ 1991 (ವರ್ಷ) ರ ಪ್ರಕಾರ ರಾಮಪ್ಪ ಪಿ. ಲಮಾಣಿ ಇವರ ಜನ್ಮ ದಿನಾಂಕವು 01.06.1973 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.

5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿ ಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರ್ ಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್ (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ.ಎಲ್. ನಾರಾಯಣ - VS - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು

ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.

24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಕೊಪ್ಪಳ, ಜಿಲ್ಲೆ ಕೊಪ್ಪಳ.

ಪಿ.ಆರ್. 241

**FORM IV**

**(See Rule 12)**

**NOTICE**

It is hereby notified that the undersigned has changed his / her name from **SMT PREMA RAJENDRA HONNALLI** to **PREMA MURUSAVIRAPPA VAKKUND.**

PD. 99 **PREMA RAJENDRA HONNALLI**

**DEPARTMENT OF EDUCATION**

**Office of the Deputy Director of Public Instruction, Bagalkot**

**FORM I**

**NOTIFICATION**

Shri / Smt: **G.I. MATHAPATI A.M.** working as SGS HS Hullyal Jamkhandi taluk in the Department of / Office of Education is permitted to change his / her name to **GURUSIDDAYYA IRAYYA AWARAWADMATH.**

PD. 97

Deputy Director of Public Instruction
Bagalkot.

**DEPARTMENT OF EDUCATION**

**Office of the Deputy Director of Public Instruction, Bagalkot**

**FORM I**

**(See Rule - 9)**

**NOTIFICATION**

Shri **AMOGI MADAR** working as Assistant Teacher in the Education Department of / Office of the Deputy Director of Public Instruction, Bagalkot is permitted to change his surname to **AMOGI YAMANAPPA IHOLLI.**

PD. 98

Deputy Director of Public Instruction
Bagalkot.

**ಲೋಕೋಪಯೋಗಿ ಇಲಾಖೆ,**

**ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ,**

**ಅಲ್ಪಾವಧಿ ಟೆಂಡರ್ ಪ್ರಕಟಣೆ**

**(ಎರಡು ಲಕೋಟೆ ಪದ್ಧತಿಯಲ್ಲಿ)**

**ನಂ. ಇಎನ್‌ಹೆಚ್ / ಚಿ / ಸ ಇ-1 / ಟೆಂ.ಪ್ರ. / ಅಗಲೀಕರಣ / 05-06 / 211, ದಿನಾಂಕ: 25ನೇ ಏಪ್ರಿಲ್ 2006**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಎರಡು ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೊಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಎರಡು ಲಕೋಟೆ ಪದ್ಧತಿಯಲ್ಲಿ (1) ತಾಂತ್ರಿಕ ಬಿಡ್ (ಭಾಗ-1) ಮತ್ತು (2) ಆರ್ಥಿಕ ಬಿಡ್ (ಭಾಗ-2) ಗಳಾಗಿರುತ್ತವೆ. ಬಿಡ್‌ಗಳನ್ನು ಎರಡು ಭಾಗಗಳಲ್ಲಿ ಎರಡು ಮೊಹರಾದ ಹಾಗೂ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎಂದು ಪ್ರತ್ಯೇಕವಾಗಿ ನಮೂದಿಸಲ್ಪಟ್ಟ ಲಕೋಟೆಗಳನ್ನು ಮತ್ತೊಂದು ಮೊಹರಾದ ಲಕೋಟೆಯಲ್ಲಿಟ್ಟು, ಹಾಗೂ ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ: 29.05.2006 ರಂದು ಸಾಯಂಕಾಲ 4.00 ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ-2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು.

ತಾಂತ್ರಿಕ ಬಿಡ್ ಭಾಗ-1 ನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದಂಥ ಗುತ್ತಿಗೆದಾರರ ಆರ್ಥಿಕ ಬಿಡ್ ಲಕೋಟೆಗಳನ್ನು ಮಾತ್ರ ತೆರೆಯಲಾಗುತ್ತದೆ. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

ಟೆಂಡರು ಕರೆ ಸಂಖ್ಯೆ : ಮೊದಲನೇ ಕರೆ

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗಧಿ ಪಡಿಸಿದ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) (ಮೊತ್ತ ರೂ. ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ + ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣ ಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1 | ರಾಷ್ಟ್ರೀಯ ಹೆದ್ದಾರಿ-63 ರ ಅಂಕೋಲ ಗುತ್ತಿ ಸೆಕ್ಷನ್ನನ ಬಳ್ಳಾರಿ ನಗರ ಪರಿಮಿತಿ ಕಿ.ಮಿ. 341 ರಿಂದ 343 ವರೆಗೆ ನಾಲ್ಕು ಪಥದ ರಸ್ತೆಯನ್ನಾಗಿ ಅಗಲೀಕರಣದ ಕಾಮಗಾರಿ. | 180.00 | ರೂ. 1,80,000/- | ರೂ. 18000 + 12.5 % ವ್ಯಾಟ್ | ಬಿ.ಎಂ. ಮತ್ತು ಎಸ್.ಡಿ.ಬಿ.ಸಿ. ಕಾಮಗಾರಿ | 5 ತಿಂಗಳು ಮಳೆಗಾಲ ಸಹಿತ |

**ಷರತ್ತುಗಳು :-** 1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗಧಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಡಿ.ಡಿ.ಯನ್ನು ಕಾರ್ಯನಿರ್ವಾಹಕ ಅಭಿಯಂತರರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು. ಗುತ್ತಿಗೆದಾರರು ಗುತ್ತಿಗೆದಾರರ ನೊಂದಾವಣಿ ಪತ್ರದ ಪ್ರತಿ, ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (ಸಂಬಂಧಪಟ್ಟ ಇಲಾಖೆಯಿಂದ ಪಡೆದು) ಹಾಗೂ ಕಾಮಗಾರಿಗೆ ನಿಗದಿ ಪಡಿಸಿದ ಯಂತ್ರೋಪಕರಣಗಳ ಮಾಲೀಕತ್ವದ ಪ್ರಮಾಣ ಪತ್ರಗಳು, ಈ ಎಲ್ಲಾ ದಾಖಲೆಗಳನ್ನು, ವಿಭಾಗ ಮಟ್ಟದ ಅಧಿಕಾರಿಗಳಿಗೆ ಕಡಿಮೆಯಿಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಿದ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**2) ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ.**

| | | | |
|---|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಹಾಗೂ ಖಾಲಿ ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ : | : | 27.05.2006 ರವರೆಗೆ (ಕಛೇರಿ ವೇಳೆಯಲ್ಲಿ) |
| ಆ) | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ. | : | 29.05.2006 ಮಧ್ಯಾಹ್ನ 4.00 ಗಂಟೆಯ ವರೆಗೆ ಅಥವಾ ಆನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಈ) | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ : | : | 29.05.2006 ಸಾಯಂಕಾಲ 5.00 ಅಥವಾ ಆನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ. |
| ಉ) | ತಾಂತ್ರಿಕವಾಗಿ ಅರ್ಹವಾದ ತಾಂತ್ರಿಕ ಬಿಡ್‌ಗಳ ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | : | 05.06.2006 ಸಾಯಂಕಾಲ 5.00 ಅಥವಾ ಆನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |

**ತಾಂತ್ರಿಕ ಬಿಡ್‌ಗಳಿಗೆ ಷರತ್ತುಗಳು**

1. ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ.: ಎಫ್.ಡಿ.ಆರ್.: ಪೇ ಆರ್ಡರ್ : ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ, ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ವನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ.-66 ದಕ್ಕೆ ಅನುಗುಣವಾಗಿರತಕ್ಕದ್ದು.

2. ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಿಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀಚಿನ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು : ಸಂಸ್ಥೆಗಳವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ : ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ. : ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.

3. ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವವನ್ನು ಹೊಂದಿರಬೇಕು ಹಾಗೂ ತಾಂತ್ರಿಕ ಬಿಡ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲೀಕತ್ವದ ಸಾಕ್ಷಿಯನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು. ಮೇಲಿನ ಮಾಲೀಕತ್ವದ ಸಾಕ್ಷಿಗಳಿಲ್ಲದ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರಮ ಸಂಖ್ಯೆ | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ. | ಮಾಲೀಕತ್ವದ ಪುರಾವೆಗಳು |
|---|---|---|---|
| 1) | 40/60 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ (ಎಂ.ಓ.ಆರ್.ಟಿ. & ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ) | ಒಂದು (1) | ಖರೀದಿಸಿದ ಇನ್‌ವಾಯ್ಸ್ : ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್ ನೊಂದಿಗೆ) |
| 2) | ಪೇವರ್ ಫಿನೀಷರ್ ಸೆನ್ಸಾರ್‌ನೊಂದಿಗೆ | ಒಂದು (1) | -ಸದರಿ- |
| 3) | ವೈಬ್ರೇಟರಿ ರೋಲರ್ | ಒಂದು (1) | -ಸದರಿ- |
| 4) | ಸ್ಟ್ಯಾಟಿಕ್ ರೋಡ್‌ರೋಲರ್ | ಎರಡು (2) | -ಸದರಿ- |
| 5) | ಮೆಕ್ಯಾನಿಕಲ್ ಸ್ಪ್ರೇಯರ್ | ಎರಡು (2) | -ಸದರಿ- |
| 6) | ಟಿಪ್ಪರ್‌ಗಳು | ನಾಲ್ಕು (4) | ಆರ್.ಟಿ.ಒ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್ |
| 7) | ಎಕ್ಸ್‌ವೇಟರ್ | ಒಂದು (1) | ಮಾಲೀಕತ್ವದ ಪ್ರಮಾಣ ಪತ್ರ |
| 8) | ಕಾಂಕ್ರೀಟ್ ಮಿಕ್ಸರ್‌ಗಳು | ಎರಡು (2) | ಖರೀದಿಸಿದ ಇನ್‌ವಾಯ್ಸ್ : ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್ ನೊಂದಿಗೆ) |
| 9) | ವೈಬ್ರೇಟರ್‌ಗಳು | ಎರಡು (2) | -ಸದರಿ- |

1. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.
2. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು, ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್‌ಅನ್ನು" ಕಡ್ಡಾಯವಾಗಿ ತಾಂತ್ರಿಕ ಬಿಡ್‌ನಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್‌ಅನ್ನು" ಸಲ್ಲಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.
3. ತಾಂತ್ರಿಕ ಬಿಡ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ವಿಭಾಗಮಟ್ಟದ ಅಧಿಕಾರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಬಿಡ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.
4. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು : ಏಜೆನ್ಸಿಗಳು : ಸಂಸ್ಥೆಯ ಪ್ರೊಫೈಲ್‌ಅನ್ನು ಲಗತ್ತಿಸತಕ್ಕದ್ದು.
5. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.
6. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.
7. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.
8. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಬಿ. ಪ್ರಭಾಕರಶೆಟ್ಟಿ**

ಪಿ.ಆರ್. 239

ಕಾರ್ಯಪಾಲಕ ಅಭಿಯಂತರು, ರಾ.ಹೆ. ವಿಭಾಗ, ಚಿತ್ರದುರ್ಗ.